KA / BG-GPO/2515/WPP-47/2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೫ | ಬೆಂಗಳೂರು, ಗುರುವಾರ, ನವೆಂಬರ್ ೪, ೨೦೧೦ (ಕಾರ್ತೀಕ ೧೩ ಶಕ ವರ್ಷ ೧೯೩೨) | ಸಂಚಿಕೆ ೪೩ |
|---|---|---|

## ಭಾಗ–೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯ, ಸಾಗರ**

**ಅಧಿಸೂಚನೆ ಸಂಖ್ಯೆ: ಬಿ3:ಅಮೊ.ವಾಹನ.24/10–11, ದಿನಾಂಕ:11ನೇ ಅಕ್ಟೋಬರ್, 2010**

ಸಾಗರ ವಿಭಾಗದ ವ್ಯಾಪ್ತಿಯಲ್ಲಿ ಶ್ರೀಗಂಧದ ಹಾಗೂ ಇತರೆ ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನಗಳನ್ನು ಸಾಗರ ವಿಭಾಗದ ಇಲಾಖಾ ಸಿಬ್ಬಂದಿ ವರ್ಗದವರು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡ ಸದರಿ ವಾಹನಗಳನ್ನು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71(ಎ) ಪ್ರಕಾರ ಜರುಗಿಸುವಂತೆ ಈ ನ್ಯಾಯಾಲಯಕ್ಕೆ ಹಾಜರುಪಡಿಸಲಾದ ವಾಹನಗಳ ತಪಶೀಲು ಕೆಳಕಂಡಂತಿರುತ್ತದೆ.

| ಕ್ರ. ಸಂ. | ವಾಹನಗಳ ವಿವರ | ಅರಣ್ಯ, ಮೊಕದ್ದಮೆ ಸಂಖ್ಯೆ | ಯಂತ್ರದ ಸಂಖ್ಯೆ | ಛಾಸೀಸ್ ಸಂಖ್ಯೆ |
|---|---|---|---|---|
| 1. | ಟಿ.ವಿ.ಎಸ್. ಮ್ಯಾಕ್ಸ್–100 ಬೈಕ್ ಕೆಎ–15–ಹೆಚ್–8961 | ಅಂಬ್ಲಿಗೊಳ ವಲಯದ ಅ.ಮೊ. ಸಂ.44/10–11 ದಿ:16.08.2010 | C9211M473485 | 9211F417551 |
| 2. | ಮಾರುತಿ ವ್ಯಾನ್ ನಂಬರ್ ಇಲ್ಲ | ಶಿರಾಳಕೊಪ್ಪ ವಲಯದ ಅ.ಮೊ. ಸಂ.29/2010–11 ದಿ:23.08.2010 | Not Visible | IN-87-2931 |
| 3. | ಕ್ಯಾಂಟರ್ ಕೆಎ–37–2369 | ಸೊರಬ ವಲಯದ ಅ.ಮೊ.ಸಂ:78/10–11 ದಿ:06.09.2010 | I50626955 | MED 50634400 |
| 4. | ಮಹೇಂದ್ರ ಫಿಕ್‌ಅಫ್ ಕೆಎ–23–7646 | ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿದಳ, ಶಿಕಾರಿಪುರ ಅ.ಮೊ.31/2010–11 ದಿ:10.09.2010 | AC11F56190 | MAIRC2ACA 12445397 |
| 5. | ಹಿರೋಹೊಂಡಾ ಸಿ.ಡಿ.ಡಿಲಕ್ಸ್ ಕೆಎ–15–ಎಲ್–0105 | ಅಂಬ್ಲಿಗೊಳ ವಲಯದ ಅ.ಮೊ. ಸಂ:55/10–11 ದಿ:05.10.2010 | HA11EA89E10643 | MBLHA11EE89E12453 |

ಈ ಮೇಲ್ಕಂಡ ವಾಹನದ ಬಗ್ಗೆ ಯಾರು ವಾರಸುದಾರರು ಇಲ್ಲಿಯವರೆಗೆ ಹಾಜರಾಗದೇ ಇರುವುದರಿಂದ ಸದರಿ ವಾಹನಗಳ ನಿಜವಾದ ವಾರಸುದಾರರು ಯಾರಾದರೂ ಇದ್ದಲ್ಲಿ ಅವರು ವಾಹನಗಳ ಬಗ್ಗೆ ಅಧಿಕೃತ ಹಕ್ಕು ಬಾದ್ಯತೆಗಳನ್ನು ಕೆಳ ಸಹಿ ಮಾಡಿರುವವರ ಸಮ್ಮುಖದಲ್ಲಿ ಅಧಿಸೂಚನೆಯು ಕರ್ನಾಟಕ ಸರ್ಕಾರದ ಗೆಜೆಟ್‌ನಲ್ಲಿ ಪ್ರಕಟವಾದ ದಿನಾಂಕದಿಂದ ಮೂವತ್ತು (30) ದಿನಗಳ ಒಳಗೆ ಹಾಜರುಪಡಿಸಬೇಕಾಗಿ ಮತ್ತು ವಾಹನಗಳನ್ನು ಶ್ರೀಗಂಧ ಮತ್ತು ಇತರೇ ಅರಣ್ಯ ಉತ್ಪನ್ನವನ್ನು ಕಳ್ಳಸಾಗಣೆ ಮಾಡಲು ಉಪಯೋಗಿಸಿದಕ್ಕಾಗಿ ವಾಹನಗಳನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ಅವರುಗಳು ಅಧಿಕೃತ ಸಮಜಾಯಿಷಿಯನ್ನು ಬರಹದ ಮೂಲಕ ಇತರೆ ದಾಖಲಾತಿಗಳೊಂದಿಗೆ ಈ ಕೆಳಸಹಿ ಮಾಡಿದವರ ಸಮ್ಮುಖದಲ್ಲಿ ಹಾಜರುಪಡಿಸಲು ಈ ಮೂಲಕ ಪ್ರಕಟಿಸಲಾಗಿದೆ. ಈ ಮೇಲ್ಕಂಡ ವಾಹನಗಳ ಬಗ್ಗೆ ಯಾವ ವಾರಸುದಾರರು

ಮೇಲ್ಕಾಣಿಸಿದ ಅವಧಿಯೊಳಗೆ ಲಿಖಿತ ಮೂಲಕ ಯಾವುದೇ ಅರ್ಜಿಯನ್ನು ಈ ಕೆಳಸಹಿದಾರರಿಗೆ ಸಲ್ಲಿಸದೇ ಇದ್ದಲ್ಲಿ ವಾಹನಗಳನ್ನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ)ರ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

**ಮನೋಜ್ ಕುಮಾರ್ ತ್ರಿಪಾಠಿ**
ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

ಪಿ.ಆರ್.1512

**ಕರ್ನಾಟಕ ವಿಧಾನಸಭೆ**

**ವಿಧಾನಸಭೆಯ ಸಚಿವಾಲಯ, ಅಂಚೆ ಪೆಟ್ಟಿಗೆ ನಂ.5074, ವಿಧಾನಸೌಧ, ಬೆಂಗಳೂರು–560 233**

**ಸಂಖ್ಯೆ: ವಿಸಸ/ಶಾರಶಾ/24/ಸಿಎ/2008–09, ದಿನಾಂಕ:30ನೇ ಸೆಪ್ಟೆಂಬರ್, 2010**

**ವಿಷಯ:** ವಿಧಾನಸಭಾ ಸದಸ್ಯರ ವಿಳಾಸದ ಬದಲಾವಣೆ.

ಬಸವನಬಾಗೇವಾಡಿ ವಿಧಾನಸಭಾ ಕ್ಷೇತ್ರದ ಮಾನ್ಯ ಸದಸ್ಯರಾದ **ಶ್ರೀ ಎಸ್.ಕೆ. ಬೆಳ್ಳುಬ್ಬಿ** ಅವರು ಕೆಳಕಂಡಂತೆ ತಮ್ಮ ವಿಳಾಸವನ್ನು ಬದಲಾಯಿಸಿರುತ್ತಾರೆ.

ಶ್ರೀ ಎಸ್.ಕೆ. ಬೆಳ್ಳುಬ್ಬಿ,
ವಿಧಾನಸಭಾ ಸದಸ್ಯರು, ನಂ.15, 3ನೇ ಮುಖ್ಯ ರಸ್ತೆ, 3ನೇ ಅಡ್ಡರಸ್ತೆ, ಆರ್.ಎಂ.ವಿ. ಎಕ್ಸ್‌ಟೆನ್ಷನ್, ನ್ಯೂ ಬಿ.ಇ.ಎಲ್.ರಸ್ತೆ,
ಬೆಂಗಳೂರು–560 094, ಮೊಬೈಲ್: 9731895943/ 9916956149.

ಆದಕಾರಣ, ಮಾನ್ಯ ಸದಸ್ಯರಿಗೆ ಇನ್ನು ಮುಂದೆ ಕಳುಹಿಸಲಾಗುವ ಎಲ್ಲಾ ಕಾಗದ ಪತ್ರಗಳನ್ನು ಮೇಲ್ಕಂಡ ವಿಳಾಸಕ್ಕೆ ಕಳುಹಿಸಿಕೊಡಬೇಕೆಂದು ಕೋರಲು ನಿರ್ದೇಶಿತನಾಗಿದ್ದೇನೆ.

**ಕೆ.ಸಿ. ಗೋಪಿಕೃಷ್ಣ**
ಅಧೀನ ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ.

ಪಿ.ಆರ್.1497

**HIGH COURT OF KARNATAKA, BANGALORE**

**NOTIFICATION NO.HCBB No.202/2010**

**DATED:5TH OCTOBER, 2010**

**DASARA VACATION OF 2010**

The High Court will remain closed for Dasara Vacation from Monday the 11th October, 2010 to Friday the 15th Ocober 2010 (Both days inclusive).

No appeals, Petitions or Applications and any other paper of Civil nature including Vakalathnama will be received during the Vacation except in cases where it is sought to obtain urgent interim orders like stay orders, attachment and temporary injunctions etc.

Criminal Appeals, Criminal Revision Petitions, Criminal Petitions and urgent applications in Criminal matters will be received during the Dasara Vacation.

There will be no sittings during Dasara Vacation in the Circuit Benches at Dharwad and Gulbarga. Urgent matters of the nature specified above pertaining to the Circuit Benches of Dharwad and Gulbarga may be filed / moved before the Principal Bench at Bangalore.

During Dasara Vacation of 2010 i.e., from Monday the 11th October 2010 to Friday the 15th October 2010 (both days inclusive) the working hours for the office of the High Court of Karnataka, Principal Bench at Bangalore and Circuit Benches at Dharwad and Gulbarga shall be between 10.15 AM to 02.00 PM, except on all Vacation Court Sitting Days, on vacation court sitting days the working hours shall be between 10.15 AM to 05.00 PM.

Vacation Benches mentioned hereunder will sit on Tuesday the 12th and Thursday the 14th October 2010 in Court Halls mentioned against them on the "SITTING DAYS" noted below at 10.30 AM during the Vacation to hear urgent matters. Matters of the nature referred to above filed during vacation and inclusive of the day previous to the sitting day will be posted before the respective Benches. But those cases filed on the sitting day will not be posted on that day, except by the Special Orders of the Vacation Bench.

On the days of sitting, after completion of the Division Bench sitting, the Vacation Judges will sit single and take up Single Bench matters.

Memos for posting will not be entertained by the Reigstrar (Judicial) or the Deputy Registrar during Dasara Vacation. Motions to take up the case/s shall be made before the respective Benches.

**PRINCIPAL BENCH AT BANGALORE**

| VACATION BENCH DIVISION BENCH | COURT HALL | VACATION JUDGES SINGLE BENCH | COURT HALL |
|---|---|---|---|
| **11.10.2010 TO 15.10.2010**<br>**Sitting day**<br>**12.10.2010** | | | |
| Hon'ble Mr. Justice N. Kumar<br>AND<br>Hon'ble Mr. Justice Jawad Rahim<br>(All Division Bench matters) | 9 | Hon'ble Mr. Justice N. Kumar<br>Hon'ble Mr. Justice<br>V. Jagannathan<br>Hon'ble Mr. Justice Jawad Rahim | 9<br>10<br><br>11 |

| VACATION BENCH DIVISION BENCH | COURT HALL | VACATION JUDGES SINGLE BENCH | COURT HALL |
|---|---|---|---|
| **11.10.2010 TO 15.10.2010**<br>**Sitting day**<br>**14.10.2010** | | | |
| Hon'ble Mr. Justice N. Kumar<br>AND<br>Hon'ble Mr. Justice H.S. Kempanna<br>(All Division Bench matters) | 9 | Hon'ble Mr. Justice N. Kumar<br>Hon'ble Mr. Justice<br>V. Jagannathan<br>Hon'ble Mr. Justice H.S. Kempanna | 9<br>10<br><br>11 |

By Order of Hon'ble the Chief Justice

PR-1490 Registrar (Judicial)

**IN THE COURT OF 2nd ADDITIONAL CHIEF METROPOLITAN MEGISTRATE, BANGALURU CITY**

**Notification No./ 2010, Dated:20th August, 2010**

It is hereby notified for the information of the public that the unclaimed properties mentioned under are in the custody of the Jayanagar Police station, Bengaluru city, as unclaimed shall be confiscated to the Government, and disposed off according to law of not claimed by the owner with proof of ownership within one months from the date of the publication of notification.

| Sl. No. | Cr.No. | Section | PF No. | Reg.No. | Chasis No. | Eng.No. |
|---|---|---|---|---|---|---|
| 1. | 40/89 | 379 IPC | 88/89 | CKJ-9609 | KD207048 | KE934211 |
| 2. | 846/97 | 379 IPC | 74/98 | CKQ-4537 | 7544107/87 | 498237107/87 |
| 3. | 331/00 | 379 IPC | 92/00 | CKP-9536 | 375284 | 393781 |
| 4. | 43/01 | 379 IPC | 21/02 | TN-28-V-7617 | | 47007663808 |
| 5. | 43/01 | 379 IPC | 21/02 | - | | |
| 6. | 239/02 | 457, 380 IPC | 90/02 | KA-05-Q-5037 | | |
| 7. | 252/02 | 379 IPC | 168/02 | Dup.KA-02-E-98, Original KA-03-E-8217 | NIFD819233 | NIFD81938 |
| 8. | 40/05 | 41 cl(d) r/w 102 crpc | 14/05 | KA-07-H-7687 | P1810E064221 | P1810M-064173 |
| 9. | 40/05 | 41 cl(d) r/w 102 crpc | 14/05 | KA-04-K-554 | | P1301M704451 |
| 10. | 40/05 | 41 cl(d) r/w 102 crpc | 15/05 | | | E30CE03403 |

| Sl. No. | Cr.No. | Section | PF No. | Reg.No. | Chasis No. | Eng.No. |
|---|---|---|---|---|---|---|
| 11. | 40/05 | 41cl (d) r/w 102 crpc | 15/05 | KA-04-E-7273 | 97B10F-06839 | 99B10E12058 |
| 12. | 314/05 | 379 IPC | 90/05 | KA-01-H-4419 | | |
| 13. | 81/06 | 41 cl(d) r/w 102 crpc & 379 IPC | 27/06 | KA-07-E-3797 | ILI308244 | ILI308244 |
| 14. | 81/06 | 41 cl(d) r/w 102 crpc & 379 IPC | 28/06 | KA-08-Y-742 | M1010F030047 | M1010M-031147 |
| 15. | 81/06 | 41 cl(d) r/w 102 crpc & 379 IPC | 29/06 | - | | |
| 16. | 236/05 | 379 IPC | 98/06 | KA-05-EN-9013 (Dup) KA-05-EN-9912 (Ori) | 812067 | 801567 |
| 17. | 66/06 | 379 IPC | 124/06 | KA-05-ED-2848 (Ori) KA-05-EN-6661 | 309368 | 309368 |
| 18. | 299/06 | 399, 402 IPC | 139/06 | KA-03-W-8334 | 7810M196575 | 7810F-148975 |
| 19. | 105/07 | 41 cl(d) r/w 102 crpc & 379 IPC | 43/07 | - | MD62AFIX 31 N85810 | 1N-310 74062 |
| 20. | 213/07 | 379 IPC | 95/07 | KA-02-E-5195 | F10E38968 | F1LF012699 |
| 21. | 213/07 | 379 IPC | 99/07 | KA-04-EC-1474 | 02C20C10873 | 02C180M07042 |
| 22. | 245/07 | 41 cl(d) r/w 102 crpc & 379 IPC | 120/07 | KA-51-E-3909 | DUMBMF56369 | DUF BMF78478 |
| 23. | 580/99 | 379 IPC | 17/08 | KA-13-E-1704 | 30M94H09482 | 30F94 H09482 |
| 24. | 51/08 | 41 cl(d) r/w 102 crpc & 379 IPC | 20/08 | KA-02-EF-4680 | KA02/2476/04 | 02F18E35462 |
| 25. | 09/08 | 379 IPC | 106/08 | KA-05-EJ-5048 | DFFBJB69961 | DFMBJB76705 |
| 26. | 201/08 | 392 IPC | 107/08 | KA-04-V-9615 | NIEQM924231 | NIFQM928635 |
| 27. | 387/08 | 41 cl(d) r/w 102 crpc & 379 IPC | 155/08 | KA-05-EH-5368 | 7909F 425554 | 7909M475077 |
| 28. | 387/08 | 41 cl(d) r/w 102 crpc & 379 IPC | 156/08 | KA-05-EG-7861 | ILI 144241 | ILI 144241 |

| Sl. No. | Cr.No. | Section | PF No. | Reg.No. | Chasis No. | Eng.No. |
|---|---|---|---|---|---|---|
| 29. | 409/08 | 41 cl(d) r/w 102 crpc & 379 IPC | 161/08 | KA-03-V-481 | | 145280042 |
| 30. | 14/09 | 379 IPC | 08/09 | KA-13-L-007 | M-1201F115960 | M-1201M117489 |
| 31. | 275/07 | 379 IPC | 30/09 | | | |
| 32. | 32/09 | 380 IPC | 39/09 | KA-04-EY-4939 | MD2BSJB22RW E47852 | JAMBRD45087 |
| 33. | 157/08 | 379 IPC | 75/09 | KA-01EE-9086 | ME4JF082E78669559 | JF08E8848481 |
| 34. | 35/09 | 41 cl(d) r/w 102 crpc & 379 IPC | 92/09 | KA-04-EL-9218 | DHVBMC61623 | DHGBMC60444 |
| 35. | 380/09 | 41 cl(d) r/w 102 crpc & 379 IPC | " | KA-03-EH-3732 | | |
| 36. | 538/09 | 41 cl(d) r/w 102 crpc & 379 IPC | 147/09 | KA-07K-1558 | DHVBM88729 | DHGVMBD87374 |
| 37. | 194/05 | 379 IPC | 03/10 | KA-04-P-808 | 7806F047644 | 78064095173 |
| 38. | 194/05 | 379 IPC | 04/10 | KA-05-ER-351 | 03L5KA-348808 | 5KA348808 |
| 39. | 81/08 | 379 IPC | 15/10 | KA-01-V-80 (dup) KA-01-V-980 (Ori) | 02M20F16046 | 02M18E11780 |
| 40. | 38/10 | 379 IPC | 23/10 | KA-04EJ-281 | 05F16C20132 | 05F15M19582 |
| 41. | 38/10 | 379 IPC | 24/10 | KA-41-J-3270 | MD621AD1972C 55819 | |
| 42. | 38/10 | 379 IPC | 24/10 | KA-05-EH-288 | MD621BD1972A69011 | |
| 43. | " | " | " | KA-38-H-7793 | D3C20F08702 | D3C18E24221 |
| 44. | 38/10 | 379 IPC | 26/10 | KA-16-E-4567 | | |
| 45. | " | " | 27/10 | KA-04-EF-5436 | ME4JF083 | JF08E5192131 |
| 46. | " | " | " | KA-05-K-88 | 372133 | 361893 |
| 47. | 194/05 | 379 IPC | 43/10 | KA-05-EB-1113 | 99919F09654 | 99G17E09422 |
| 48. | " | " | " | KA-04-EC-3831 | 03G20C12378 | 03G18M01726 |
| 49. | " | " | " | | 96819F01380 | 96B17E01348 |
| 50. | " | " | " | KA-43-EM-2270 | MD625AF1752E 30583 | 0FE51405921 |
| 51. | 194/05 | 379 IPC | 44/10 | KA-02-ES-3846 | N3302F394528 | N3302M399879 |

**Auto Rikshaws**

| Sl. No. | Cr.No. | Section | PF No. | Reg.No. | Chasis No. | Eng.No. |
|---|---|---|---|---|---|---|
| 1. | 660/01 | 379 IPC | 226/01 | MH-08-D-5391 (Dup), KA-02-4156 (Ori) | 24F93K27243 | - |
| 2. | 432/08 | 399, 402 IPC | 170/08 | KA-05-C-1063 | | |
| 3. | 02/09 | 392 IPC | 44/09 | KA-03-1906 | | |

**Cars**

| Sl. No. | Cr.No. | Section | PF No. | Reg.No. | Chasis No. | Eng.No. |
|---|---|---|---|---|---|---|
| 1. | 253/03 | 379 IPC | 70/03 | KA-34-P-3638 | SB-308 IN1296608 | F8-B1M1792513 |
| 2. | 197/05 | 399, 400 IPC | 59/05 | KA-02-P-1511 | | |

II Addl. Chief Metro Politan Magistrate,

PR-1500 Bangalore City.

**IN THE COURT OF THE VIII ADDL CHIEF METROPOLITAN MAGISTRATE, BANGALORE CITY**

It is hereby notified for the information of the public that the under mentioned AUTO RIKSHAW which is in the custody of Sheshadripuram Police Station, Bangalore City has unclaimed shell be confiscated to the Government and disposed to law if not claimed by the owner with proof of ownership with in three month from the date of publication of this notification.

| Sl. No. | C.Miss No. | P.F. No. | Vehicle No. | Eng. & Chasis No. | Nature of property |
|---|---|---|---|---|---|
| 1. | 310/2007 | 93/2007 | KA-05-D-2536 | Eng No.AEMBIIF44288<br>Chasis No.24FBHGO3317 | AUTO RIKSHAW |

VIII Addl. Chief MetroPolitan Magistrate,

PR-1511 Bangalore City.

**ಕರ್ನಾಟಕ ಸರ್ಕಾರ**

**ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಬಹುಮಹಡಿಗಳ ಕಟ್ಟಡ, ಬೆಂಗಳೂರು–1,**

**ಸಂಖ್ಯೆ:ಆಸಾನಿ/11/ಆಡಳಿತ–2/2007–08, ದಿನಾಂಕ:30ನೇ ಸೆಪ್ಟೆಂಬರ್, 2010**

**ವಿಷಯ:** ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರು (ಪ್ರಸ್ತುತ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿ, ಕೋಲಾರ ಇವರು ಬೆಂಗಳೂರು (ಗ್ರಾಮಾಂತರ) ಮತ್ತು ರಾಮನಗರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಎಸಗಿದ ಕರ್ತವ್ಯಲೋಪ, ಅನಧಿಕೃತ ಗೈರು ಹಾಜರಾತಿ, ಸರ್ಕಾರದ ದಾಖಲಾತಿಗಳ ಬದಲಾವಣೆ (tampering of office records) ಇತ್ಯಾದಿ ಆರೋಪಗಳ ಮೇಲೆ ಅಮಾನತ್ತುಗೊಂಡ ನಂತರ ಸೇವೆಗೆ ಪುನರ್ ಸ್ಥಾಪನೆಗೊಂಡಿರುವ ಸರ್ಕಾರಿ ನೌಕರ ಇವರ ವಿರುದ್ಧ "ಇಲಾಖಾ ವಿಚಾರಣೆಗೆ ಸಂಬಂಧಿಸಿದಂತೆ ಅಂತಿಮ ಆದೇಶ ಹೊರಡಿಸುವ ಕುರಿತು"

**ಉಲ್ಲೇಖ:**
1) ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ರಾಮನಗರ ಜಿಲ್ಲೆ ಇವರ ಪತ್ರದ ಸಂಖ್ಯೆ:ಜಿಸಂಸಂ/ರಾಮ/152/08–09, ದಿನಾಂಕ 20.5.2008.
2) ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಇವರ ಪತ್ರದ ಸಂಖ್ಯೆ:ಜಿಸಂಸಂ/ ಆಡಳಿತ/ 282/07–08, ದಿನಾಂಕ 23.5.2008.
3) ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ರಾಮನಗರ ಜಿಲ್ಲೆ ಇವರ ಪತ್ರದ ಸಂಖ್ಯೆ:ಜಿಸಂಸಂ/ರಾಮ/152/08–09, ದಿನಾಂಕ 30.6.2008.
4) ಈ ನಿರ್ದೇಶನಾಲಯದ ಇದೇ ಕ್ರಮಾಂಕದ ಆದೇಶದ ಸಂಖ್ಯೆ:ಆಡಳಿತ/16/2008–09, ದಿನಾಂಕ 17.7.2008.
5) ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1954ರ ನಿಯಮ:11ರ ಅಡಿಯಲ್ಲಿ ಹೊರಡಿಸಲಾದ ಈ ನಿರ್ದೇಶನಾಲಯದ ಇದೇ ಕ್ರಮಾಂಕದ ಕಾರಣ ಕೇಳುವ ಜ್ಞಾಪನದ ದಿನಾಂಕ 17.9.2008.
6) ಸೇವೆಯಲ್ಲಿ ಅಮಾನತ್ತಿನಲ್ಲಿದ್ದ ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರು ಸಲ್ಲಿಸಿದ ಕೋರಿಕೆ ದಿನಾಂಕ 27.10.2008.
7) ನಿರ್ದೇಶನಾಲಯದ ಇದೇ ಕ್ರಮಾಂಕದ ಜ್ಞಾಪನದ ದಿನಾಂಕ 7.11.2008.
8) ಆಪಾದಿತ ಸರ್ಕಾರಿ ನೌಕರರಾದ ಶ್ರೀ ಆದಿಕುಮಾರ್, ಅವರ ಮನವಿ ದಿನಾಂಕ 25.11.2008.
9) ನಿರ್ದೇಶನಾಲಯದ ಇದೇ ಕ್ರಮಾಂಕದ ಆದೇಶದ ಸಂಖ್ಯೆ:ಆಡಳಿತ: 412/2008–09, ದಿನಾಂಕ 22.12.2008.
10) ಈ ನಿರ್ದೇಶನಾಲಯದ ಇದೇ ಕ್ರಮಾಂಕದ ಜ್ಞಾಪನದ ದಿನಾಂಕ 22.12.2008.
11) ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರು ಇವರ ಮನವಿ ದಿನಾಂಕ 5.01.2009.
12) ಈ ನಿರ್ದೇಶನಾಲಯದ ಇದೇ ಕ್ರಮಾಂಕದ ಜ್ಞಾಪನದ ದಿನಾಂಕ 4/11.2.2009.
13) ಈ ನಿರ್ದೇಶನಾಲಯದ ಇದೇ ಕ್ರಮಾಂಕದ ಆದೇಶದ ದಿನಾಂಕ 11.2.2009.

14) ನಿವೃತ್ತ ಜಿಲ್ಲಾ ನ್ಯಾಯಾಧೀಶರು ಹಾಗೂ ವಿಚಾರಣಾಧಿಕಾರಿಗಳು ಇವರ ಪತ್ರದ ದಿನಾಂಕ 21.4.2010 ರೊಂದಿಗೆ ಸಲ್ಲಿಸಿದ ಇಲಾಖಾ ವಿಚಾರಣಾ ವರದಿ.

15) ಆರೋಪಿತ ಸರ್ಕಾರಿ ನೌಕರರಾದ ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರು ಇವರಿಗೆ ಹೊರಡಿಸಲಾದ ಇದೇ ಕ್ರಮಾಂಕದ 2ನೇ ಕಾರಣ ಕೇಳುವ ಜ್ಞಾಪನದ ದಿನಾಂಕ 27.4.2010.

16) ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರು ಇವರ ಮನವಿಗಳು ದಿನಾಂಕ (1) 24.5.2010 (2) 2.6.2010

17) ಈ ನಿರ್ದೇಶನಾಲಯದ ಇದೇ ಕ್ರಮಾಂಕದ ಹಿಂಬರಹಗಳು ದಿನಾಂಕ (1) 15.6.2010.

18) ಆಪಾದಿತ ಸರ್ಕಾರಿ ನೌಕರರ ಮನವಿ ದಿನಾಂಕ 6.7.2010.

19) ಈ ನಿರ್ದೇಶನಾಲಯದ ಇದೇ ಕ್ರಮಾಂಕದ ಹಿಂಬರಹ ದಿನಾಂಕ 27.7.2010.

**ಪ್ರಸ್ತಾವನೆ:**

ಈ ನಿರ್ದೇಶನಾಲಯದ ಪ್ರಥಮ ದರ್ಜೆ ಸಹಾಯಕರಾದ ಶ್ರೀ ಆದಿಕುಮಾರ್, ಇವರನ್ನು ಈ ನಿರ್ದೇಶನಾಲಯದ ಆದೇಶದ ಸಂಖ್ಯೆ:ಆಡಳಿತ/260/2006–07, ದಿನಾಂಕ 29.6.2006ರಲ್ಲಿ ಕೇಂದ್ರ ಕಚೇರಿಯಿಂದ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿ, ಬೆಂಗಳೂರು (ಗ್ರಾಮಾಂತರ ಜಿಲ್ಲೆ) ಇಲ್ಲಿ ಅನ್ಯ ಕರ್ತವ್ಯದ ಮೇಲೆ ನಿಯೋಜಿಸಲಾಗಿತ್ತು.

ಈ ಅವಧಿಯಲ್ಲಿ ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರು, ಇವರ ನಿರಂತರವಾದ ಅನಧಿಕೃತ ಗೈರು ಹಾಜರಾತಿ, ಸ್ವಹಿತಾಸಕ್ತಿ ಆಧರಿಸಿ ಕರ್ತವ್ಯ ನಿರ್ವಹಣೆ, ಕಚೇರಿ ಮುಖ್ಯಸ್ಥರಿಗೆ ತಪ್ಪು ಮಾಹಿತಿ ನೀಡಿ ತನಗೆ ಅನುಕೂಲವಾಗುವ ರೀತಿಯಲ್ಲಿ ಪತ್ರ ವ್ಯವಹಾರ ಮಾಡುವುದು, ನಂಬಿಕೆ ದ್ರೋಹ ಎಸಗುವುದು, ಇತ್ಯಾದಿ ದುರ್ನಡತೆ ಕಾರಣಗಳಿಂದ, ಅವರನ್ನು ಸರ್ಕಾರದ ಸೇವೆಯಿಂದ ಅಮಾನತ್ತುಗೊಳಿಸುವುದರ ಬದಲಾಗಿ, ಈ ನಿರ್ದೇಶನಾಲಯದ ಆದೇಶದ ಸಂಖ್ಯೆ:ಆಡಳಿತ/665/2007–08, ದಿನಾಂಕ 11.1.2008ರಲ್ಲಿ ಅವರನ್ನು ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿ, ರಾಮನಗರ ಜಿಲ್ಲೆ (ಹೊಸದಾಗಿ ಸೃಜಿಸಲಾದ ಜಿಲ್ಲೆ/ ಕಚೇರಿ) ಇಲ್ಲಿಗೆ ಸ್ಥಳಾಂತರಿಸಲಾಗಿತ್ತು.

ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರು ( ಈ ಇಲಾಖಾ ವಿಚಾರಣಾ ಪ್ರಕರಣದಲ್ಲಿ ಆಪಾದಿತ ಸರ್ಕಾರಿ ನೌಕರರು), ರಾಮನಗರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿಗೆ ಸ್ಥಳಾಂತರಗೊಂಡಿದ್ದರಿಂದ, ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ಬೆಂಗಳೂರು (ಗ್ರಾಮಾಂತರ ಜಿಲ್ಲೆ) ಇವರ ಆದೇಶದ ಸಂಖ್ಯೆ:ಆಡಳಿತ/57/2007–08, ದಿನಾಂಕ 29.1.2008ರಲ್ಲಿ ಇನ್ನಿತರ ವಿಷಯಗಳೊಂದಿಗೆ **ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರು ಇವರ ಪ್ರಭಾರವನ್ನು ಶ್ರೀಮತಿ ಮಂಜುಳ, ಬೆರಳಚ್ಚುಗಾರರು ಇವರಿಗೆ ವಹಿಸಿಕೊಳ್ಳುವಂತೆ ಸೂಚಿಸಿದ್ದರಿಂದ"** ಆಪಾದಿತ ಸರ್ಕಾರಿ ನೌಕರರು ಆ ಕಚೇರಿಯಲ್ಲಿ ನಿರ್ವಹಿಸುತ್ತಿದ್ದ ಆಡಳಿತ ಮತ್ತು ಲೆಕ್ಕ ವಿಭಾಗಕ್ಕೆ ಸಂಬಂಧಿಸಿದ ಎಲ್ಲಾ ದಾಖಲಾತಿಗಳನ್ನು ಸೂಚಿಸಿದವರಿಗೆ ವಹಿಸತಕ್ಕದ್ದು ಅವರ ಕರ್ತವ್ಯ ಮತ್ತು ಜವಾಬ್ದಾರಿಯಾಗಿದ್ದರೂ (as per Rule:8(i) of "Hand Book of Office Procedure" which reads as "case worker shall prepare, whenever there is a transfer, a detailed list of all the papers and cases pending with him with reference to the special Registers, periodical registers, and case register and hand over complete charge of these records and registers to his successors) ಪ್ರಭಾರವನ್ನು ವಹಿಸುವ ಬಗ್ಗೆ ಈ ವಿಧಾನವನ್ನು ಅನುಸರಿಸದೇ "ಅತ್ಯಂತ ಬೇಜವಾಬ್ದಾರಿ ರೀತಿಯಲ್ಲಿ ವರ್ತಿಸಿದ್ದರಿಂದ ಹಾಗೂ ಈ ಅಪಾದಿತ ಸರ್ಕಾರಿ ನೌಕರರು ಎಸಗಿದ ದುರ್ನಡತೆ ಮತ್ತು ಕರ್ತವ್ಯಲೋಪದ ಕಾರಣದಿಂದ ಆ ಕಚೇರಿಯ ಸಿಬ್ಬಂದಿಗಳ ಸೇವಾ ವಿಷಯಗಳ ನಿರ್ವಹಣೆ ಮತ್ತು ಲೆಕ್ಕ ವಿಭಾಗದ ಕಾರ್ಯಗಳು ಸ್ಥಗಿತಗೊಂಡಿದ್ದರಿಂದ, ಆ ಕಚೇರಿಯಲ್ಲಿ ಈ ಆಪಾದಿತ ಸರ್ಕಾರಿ ನೌಕರನಿಗೆ ಒದಗಿಸಲಾಗಿದ್ದ ಕಪಾಟಿನ ಬೀಗವನ್ನು **ದಿನಾಂಕ 23.5.2008** ರಂದು ಬೆಂಗಳೂರು (ಗ್ರಾಮಾಂತರ) ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು ಮತ್ತು ಸಿಬ್ಬಂದಿಗಳ ಉಪಸ್ಥಿತಿಯಲ್ಲಿ ಬಲವಂತವಾಗಿ ತೆರೆಯಿಸಿ, ಅವರು ನಿರ್ವಹಿಸಿದ್ದ/ ಬಾಕಿ ಇರಿಸಿಕೊಂಡಿದ್ದ ಪತ್ರ ವ್ಯವಹಾರ, ಸಿಬ್ಬಂದಿಗಳ ಸೇವಾ ಪುಸ್ತಕಗಳು, ಕಡತಗಳು ಹಾಗೂ ಇನ್ನಿತರ ದಾಖಲಾತಿಗಳನ್ನು (ಒಟ್ಟು 141) ಕಚೇರಿಯ ವಶಕ್ಕೆ ಪಡೆದುಕೊಂಡಿದ್ದನ್ನು ಉಲ್ಲೇಖ(2)ರಲ್ಲಿನ ಬೆಂಗಳೂರು (ಗ್ರಾಮಾಂತರ) ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ಇವರ ವರದಿಯಲ್ಲಿ ಸ್ಪಷ್ಟವಾಗಿ ಕಂಡು ಬರುತ್ತದೆ.

ಮೇಲಿನ ಕಂಡಿಕೆಯಲ್ಲಿ ವಿವರಿಸಿದಂತೆ, ಆಪಾದಿತ ಸರ್ಕಾರಿ ನೌಕರರಾದ ಶ್ರೀ ಆದಿಕುಮಾರ್ ಇವರನ್ನು ರಾಮನಗರ, ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿಗೆ ಸ್ಥಳಾಂತರಿಸಿದ ನಂತರವೂ ಅವರ "ಅನಧಿಕೃತ ಗೈರು ಹಾಜರಾತಿ", ಬೇಜವಾಬ್ದಾರಿತನ, ಕರ್ತವ್ಯ ಲೋಪ," ಇತ್ಯಾದಿ ಪ್ರವೃತ್ತಿಯನ್ನು ನಿರಂತರವಾಗಿ ಮುಂದುವರೆಸಿದ್ದರಿಂದ, ಈ **ಆಪಾದಿತ ಸರ್ಕಾರಿ ನೌಕರರಾದ ಶ್ರೀ ಆದಿಕುಮಾರ್,** ಇವರಿಗೆ ಅವರ ಮನೆ ವಿಳಾಸಕ್ಕೆ ನೀಡಲಾಗಿದ್ದ ಜ್ಞಾಪನದ ಸಂಖ್ಯೆ:ಜಿಸಂಸಂ/ರಾಮ/ಆಡಳಿತ/30/07–08, ದಿನಾಂಕ 15.5.2008ರಲ್ಲಿ, ಸದರಿಯವರು ದಿನಾಂಕ 23.4.2008ರಂದು ದಿನಾಂಕ 24.4.2008 ರಂದು ಹಾಗೂ ದಿನಾಂಕ 1.5.2008 ರಿಂದ ದಿನಾಂಕ 15.5.2008ರ ವರೆಗೆ (ಒಟ್ಟು ಗೈರು ಹಾಜರಾದ ದಿನಗಳು 17) ಅನಧಿಕೃತ ಗೈರು ಹಾಜರಾತಿಯಿಂದ ಆ ಕಚೇರಿಯ ಸಿಬ್ಬಂದಿಗಳ ಮಾಸಿಕ ವೇತನ ಬಿಲ್ಲು ತಯಾರಿಕೆ ಸಹಿತವಾಗಿ ಆಡಳಿತ ಮತ್ತು ಲೆಕ್ಕ ವಿಭಾಗದ ಕರ್ತವ್ಯ ನಿರ್ವಹಣೆ ಸಂಪೂರ್ಣವಾಗಿ ಸ್ಥಗಿತಗೊಂಡಿದ್ದನ್ನು ವಿವರಿಸಿ, ಕರ್ತವ್ಯಕ್ಕೆ ಹಾಜರಾಗುವಂತೆ ಸೂಚಿಸಲಾಗಿದ್ದರೂ, ಅವರು ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾತಿಯನ್ನು ಮುಂದುವರೆಸಿದ್ದರಿಂದ, ಆ ಕಚೇರಿಯ ಆಡಳಿತ ಮತ್ತು ಲೆಕ್ಕ ವಿಭಾಗದ ಕರ್ತವ್ಯಗಳ ಹಿತದೃಷ್ಟಿಯಿಂದ ಹಾಗೂ ಆ ವಿಭಾಗದ ಕಾರ್ಯಗಳು ಸ್ಥಗಿತಗೊಂಡಿರುವುದರಿಂದ ಕಚೇರಿ ಕಾರ್ಯಗಳ ನಿರ್ವಹಣೆಗಾಗಿ ಅವರಿಗೆ ನೀಡಲಾದ ಕಪಾಟಿನ ಬೀಗವನ್ನು ದಿನಾಂಕ 15.5.2008ರಂದು ರಾಮನಗರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಮತ್ತು ಸಿಬ್ಬಂದಿಗಳ ಉಪಸ್ಥಿತಿಯಲ್ಲಿ ಬಲವಂತವಾಗಿ ತೆರೆಯಿಸಿ, ಅವರು ನಿರ್ವಹಿಸುತ್ತಿದ್ದ/ ಬಾಕಿ ಇರಿಸಿಕೊಂಡಿದ್ದ, ಪತ್ರವ್ಯವಹಾರ, ಸೇವಾ ಪುಸ್ತಕಗಳು, ಕಡತಗಳನ್ನು ಹಾಗೂ ಇನ್ನಿತರ ದಾಖಲಾತಿಗಳನ್ನು ಕಚೇರಿ ವಶಕ್ಕೆ ಪಡೆದುಕೊಂಡಿರುವ ಕುರಿತು ಉಲ್ಲೇಖ(1)ರಲ್ಲಿನ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ರಾಮನಗರ ಇವರ ಪತ್ರದಲ್ಲಿ ವರದಿ ಸಲ್ಲಿಸಿರುತ್ತಾರೆ.

ಈ ಪ್ರಕರಣದಲ್ಲಿ ಆಪಾದಿತ ಸರ್ಕಾರಿ ನೌಕರರಾದ ಶ್ರೀ ಆದಿಕುಮಾರ್, ಅವರು ಅವರ ಅನಧಿಕೃತ ಗೈರು ಹಾಜರಾತಿಯ ದುರ್ನಡತೆಯನ್ನು ಮುಂದುವರೆಸುವುದನ್ನು ಸೀಮಿತಗೊಳಿಸದೇ, ಇವರು "ಸರ್ಕಾರದ ಹಣಕಾಸಿನ ವಿಷಯಕ್ಕೆ ಸಂಬಂಧಿಸಿದ ದಾಖಲಾತಿಗಳನ್ನು **ಅವರಿಗೆ ಅನುಕೂಲವಾಗುವ ರೀತಿಯಲ್ಲಿ ದುರುದ್ದೇಶದಿಂದ ಬದಲಾಯಿಸಿ** ಗಂಭೀರವಾದ ದಂಡಾರ್ಹ ದುರ್ನಡತೆ (Criminal misconduct) ಪ್ರದರ್ಶಿಸಿ ನಂಬಿಕೆ ದ್ರೋಹ ಎಸಗಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವ ಕುರಿತು, ರಾಮನಗರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ಮೇಲಿನ ಕಂಡಿಕೆಯಲ್ಲಿ ವಿವರಿಸಿದಂತೆ, ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿದ್ದ ಶ್ರೀ ಆದಿಕುಮಾರ್, ಅವರ ಮನೆ ವಿಳಾಸಕ್ಕೆ ನೀಡಲಾದ ಜ್ಞಾಪನದ ಸಂಖ್ಯೆ: ಜಿಸಂಸಂ/ರಾಮ/ಆಡಳಿತ/338–40/2008–09, ದಿನಾಂಕ 24.6.2008ರಲ್ಲಿ **"ಅವರ ಕಚೇರಿಯ ದ್ವಿತೀಯ ದರ್ಜೆ ಸಹಾಯಕರಾದ ಕುಮಾರಿ ಆರ್. ಜ್ಯೋತಿ, ಇವರ ಅಕ್ಟೋಬರ್ 2007 ರಿಂದ ಫೆಬ್ರವರಿ 2008ರ ವರೆಗಿನ ವೇತನ ರೂ.34,774/– ಗಳನ್ನು ಡ್ರಾ ಮಾಡಿ, ವೇತನ ಬಟವಾಡೆ ಪುಸ್ತಕದಲ್ಲಿ ರೂ.34,774/– ಎಂದು ಇದ್ದ ಮೊತ್ತವನ್ನು ರೂ.32,774/– ಎಂದು ತಿದ್ದಿರುವ** ಕುರಿತು ಅವರ ವಿವರಣೆ ನೀಡುವಂತೆ ನೀಡಲಾದ ಜ್ಞಾಪನ, ಅದೇ ಆರೋಪಿತ ಪ್ರಥಮ ದರ್ಜೆ ಸಹಾಯಕರಾದ ಶ್ರೀ ಆದಿಕುಮಾರ್, ಇವರು "**ಶ್ರೀಮತಿ ಪಿ. ಮಂಜು, ಗಣತಿದಾರರು,** ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿ, ರಾಮನಗರ ಹಾಗೂ **ಶ್ರೀಮತಿ ವೀಣಾ ಕುಲಕರ್ಣೀ, ಗಣತಿದಾರರು,** ತಾಲ್ಲೂಕು ಕಚೇರಿ, ಹೊಸಕೋಟೆ (ಬೆಂಗಳೂರು ಗ್ರಾಮಾಂತರ ಜಿಲ್ಲೆ) ಇವರುಗಳಿಂದ ತಲಾ ರೂ.2550–00 ಮತ್ತು 5600–00 ಗಳನ್ನು, ಸರ್ಕಾರದ ಕಚೇರಿಗಳಲ್ಲಿ ಅನುಷ್ಠಾನಗೊಳಿಸದೇ ಇದ್ದ ಉದ್ದೇಶಕ್ಕಾಗಿ ಅನಧಿಕೃತವಾಗಿ ಹಣ ವಸೂಲು ಮಾಡಿರುವ ಆಪಾದನೆ ಹಾಗೂ ಅವರ ಮೇಲಿನ ಇನ್ನಿತರ ಅತೀ ಗಂಭೀರ ಸ್ವರೂಪದ ಆಪಾದನೆಗಳನ್ನು ಪರಿಗಣಿಸಿ, ಈ ನಿರ್ದೇಶನಾಲಯದ ಉಲ್ಲೇಖ(4)ರಲ್ಲಿನ ಇದೇ ಕ್ರಮಾಂಕದ ಆದೇಶದ ಸಂಖ್ಯೆ:ಆಡಳಿತ/216/2008–09, ದಿನಾಂಕ 17.7.2008ರಲ್ಲಿ, ಶ್ರೀ ಆದಿಕುಮಾರ್, ಆರೋಪಿತ ಸರ್ಕಾರಿ ನೌಕರರು ಇವರ ವಿರುದ್ಧ ಇಲಾಖಾ ವಿಚಾರಣೆ ಕಾಯ್ದಿರಿಸಿ, ಅವರನ್ನು ಸರ್ಕಾರದ ಸೇವೆಯಿಂದ ಅಮಾನತ್ತುಗೊಳಿಸಲಾಗಿತ್ತು.

ಮೇಲೆ ವಿವರಿಸಿದಂತೆ ಹಾಗೂ ಅಮಾನತ್ತು ಆದೇಶದನ್ವಯ, ಆರೋಪಿತ ಸರ್ಕಾರಿ ನೌಕರರಾದ ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರು ಇವರು "ಬೆಂಗಳೂರು (ಗ್ರಾಮಾಂತರ) ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿಯಲ್ಲಿ (ಅನ್ಯ ಕರ್ತವ್ಯದ ಮೇಲೆ) ನಂತರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿ, ರಾಮನಗರ ಜಿಲ್ಲೆ, ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಎಸಗಿದ ಕರ್ತವ್ಯಲೋಪ, ದಂಡಾರ್ಹ ದುರ್ನಡತೆ, ನಿರಂತರವಾದ ಅನಧಿಕೃತ ಗೈರು ಹಾಜರಾಗಿ, ಇತ್ಯಾದಿ ಅಪಾದನೆಗಳನ್ನೊಳಗೊಂಡಂತೆ "ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ:11ರ ಅನ್ವಯ", ಅವರ ಮೇಲಿನ ಆರೋಪಗಳನ್ನು **"ಆರೋಪಗಳಿಗೆ ಸಂಬಂಧಿಸಿದಂತೆ ವಿವರಣೆಯನ್ನು, ಆರೋಪಗಳನ್ನು ಸಮರ್ಥಿಸುವ ದಸ್ತಾವೇಜುಗಳನ್ನು ಹಾಗೂ ಸಾಕ್ಷಿ ಪಟ್ಟಿಯನ್ನು"** ಈ ಕೆಳಗೆ ತಿಳಿಸಲಾದ 12 ಆರೋಪಗಳನ್ನೊಳಗೊಂಡಂತೆ ಅನುಕ್ರಮವಾಗಿ ಅನುಬಂಧ–1 ರಿಂದ 4ರ ವರೆಗೆ ಲಗತ್ತಿಸಿ, ಉಲ್ಲೇಖ(5)ರಲ್ಲಿ ಹೊರಡಿಸಲಾದ "ಕಾರಣ ಕೇಳುವ ಜ್ಞಾಪನ" ದಿನಾಂಕ 17.09.2008ರಲ್ಲಿ ಅದು ಅವರಿಗೆ ತಲುಪಿದ/ ಜಾರಿಯಾದ 15 ದಿನಗಳ ಒಳಗಾಗಿ ಅವರ ಮೇಲೆ ಹೊರಿಸಲಾದ ಆರೋಪಗಳಿಗೆ ಸಂಬಂಧಿಸಿದಂತೆ, ಅವರ ಲಿಖಿತ ಹೇಳಿಕೆಯನ್ನು ಸಲ್ಲಿಸುವಂತೆ ಸೂಚಿಸಲಾಗಿತ್ತು.

**ಆರೋಪ:1**

ಶ್ರೀ ಆದಿಕುಮಾರ್, ಈ ನಿರ್ದೇಶನಾಲಯದ ಪ್ರಥಮ ದರ್ಜೆ ಸಹಾಯಕರಾದ (ಪ್ರಸ್ತುತ ಅಮಾನತ್ತಿನಲ್ಲಿ) ಹಾಗೂ ಆಪಾದಿತ ದುರ್ನಡತೆ ಹೊಂದಿದ ನೀವು ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿಯಲ್ಲಿ ನಿಯೋಜನೆ ಮೇಲೆ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಗೆ ಸಂಬಂಧಿಸಿದಂತೆ, ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು ದಿನಾಂಕ 21.5.2007ರ ಪತ್ರದಲ್ಲಿ ಇನ್ನಿತರ ವಿಷಯಗಳೊಂದಿಗೆ ನಿಮ್ಮ ಅನಧಿಕೃತ ಗೈರು ಹಾಜರಾತಿ ಕಾರಣದಿಂದ ಅವರ ಕಚೇರಿ ಸಿಬ್ಬಂದಿಗಳ ಸೇವಾ ವಿಷಯ ನಿರ್ವಹಣೆ, ವೇತನ ಬಿಲ್ಲು ತಯಾರಿಕೆ, ಇತ್ಯಾದಿ ಕರ್ತವ್ಯ ನಿರ್ವಹಣೆಗೆ ತೊಂದರೆಯಾಗುತ್ತಿದ್ದು, ನಿಮ್ಮ ಸೇವೆಯನ್ನು ಅವರ ಕಚೇರಿಯಿಂದ ಹಿಂದಕ್ಕೆ ಪಡೆಯಬೇಕೆಂದು ಕೋರಿದರು. ಈ ಪ್ರಸ್ತಾವನೆಯನ್ನು ಪರಿಶೀಲಿಸುವ ಹಂತದಲ್ಲಿ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಪ್ರಸ್ತುತ ಇಲಾಖಾ ವಿಚಾರಣೆ ಪ್ರಕರಣದಲ್ಲಿ ಆಪಾದಿತ ದುರ್ನಡತೆ ಹೊಂದಿದ ಸರ್ಕಾರಿ ನೌಕರರಾದ ನಿಮ್ಮ ಸ್ವಂತ ಕೈಬರಹದಿಂದ ಬರೆಯಲಾದ ಪತ್ರದ ಸಂಖ್ಯೆ:ಜಿಸಂಸಂಬೆಂಗ್ರಾ/ಆಡಳಿತ/06–07, ದಿನಾಂಕ 13.7.2007ರಲ್ಲಿ "ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರು, ಈ ಕಚೇರಿಯಲ್ಲಿ ಉತ್ತಮವಾಗಿ ಕಾರ್ಯನಿರ್ವಹಿಸುತ್ತಿರುವುದರಿಂದ ಇವರನ್ನು ವರ್ಗಾವಣೆ ಮಾಡಬಾರದಾಗಿ ತಮ್ಮಲ್ಲಿ ವಿನಂತಿಸಿಕೊಳ್ಳುತ್ತೇನೆ' ಎಂದು ಮರು ಪ್ರಸ್ತಾವನೆ ಸಲ್ಲಿಸಿದ್ದನ್ನು ಕೇಂದ್ರ ಕಚೇರಿಯು ತೀಕ್ಷ್ಣವಾಗಿ ಪ್ರತಿಕ್ರಿಯಿಸಿ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ದ್ವಂದ್ವ ಹೇಳಿಕೆ (duel statement) ಕುರಿತು ಅವರ ವಿವರಣೆ ಕೇಳಲಾಗಿ, ಆಪಾದಿತ ಸರ್ಕಾರಿ ನೌಕರರಾದ ನೀವು ನಿರ್ದೇಶಕರಿಗೆ ಒಂದು ಮನವಿ ಪತ್ರವನ್ನು ತುರ್ತಾಗಿ ಕಳುಹಿಸಬೇಕಾಗಿದೆ" ಎಂದು ಅದು ನಿಮ್ಮ ವೈಯಕ್ತಿಕ ವರ್ಗಾವಣೆ ವಿಷಯವೆಂದು ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳಿಗೆ ಮಾಹಿತಿ ನೀಡದೆ, ಆತುರವಾಗಿ ಸಹಿ ಮಾಡುವಂತೆ ತಿಳಿಸಿದ್ದರಿಂದ "ನಿಮ್ಮ ಮೇಲೆ ನಂಬಿಕೆ ಇಟ್ಟು ಸಹಿ ಮಾಡಿದ್ದಾಗಿ" ಹಾಗೂ ಆಪಾದಿತ ಸರ್ಕಾರಿ ನೌಕರರಾದ ನೀವು "ಉತ್ತಮವಾಗಿ ಕಾರ್ಯನಿರ್ವಹಿಸುತ್ತಿದ್ದಾರೆಂದು" ಬರೆದಿದ್ದನ್ನು ಅವರು ಗಮನಿಸಿರಲಿಲ್ಲವೆಂದು ತಿಳಿಸಿರುತ್ತಾರೆ.

ಆದುದರಿಂದ, ಈ ಪ್ರಕರಣದಲ್ಲಿ ಆಪಾದಿತ ಸರ್ಕಾರಿ ನೌಕರರಾದ ನೀವು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು 1966ರ ನಿಯಮವನ್ನು ಉಲ್ಲಂಘಿಸಿರುವುದು ಸ್ಪಷ್ಟವಾಗಿ ಕಂಡು ಬರುತ್ತದೆ. ಹಾಗೂ ಕಚೇರಿ ಮುಖ್ಯಸ್ಥರಿಗೆ/ ಇಲಾಖಾ ಮುಖ್ಯಸ್ಥರಿಗೆ "ನಂಬಿಕೆ ದ್ರೋಹ" ಎಸಗಿರುತ್ತೀರಿ.

**ಆರೋಪ:2**

ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದ ಆದೇಶದ ಸಂಖ್ಯೆ:ಆಡಳಿತ/661/2007–08, ದಿನಾಂಕ 11.1.2008ರಲ್ಲಿ ಆಪಾದಿತ ಸರ್ಕಾರಿ ನೌಕರರಾದ ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರಾದ ನಿಮ್ಮನ್ನು ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿ, ರಾಮನಗರ ಜಿಲ್ಲೆ, ಇಲ್ಲಿಗೆ

ವರ್ಗಾವಣೆ ಮಾಡಿದ್ದರಿಂದ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಇವರ ಕಚೇರಿ ಆದೇಶದ ಸಂಖ್ಯೆ:ಆಡಳಿತ/51/2007–08, ದಿನಾಂಕ 29.1.2008ರಲ್ಲಿ ದಿನಾಂಕ 31.1.2008 ರಿಂದ ಅನ್ವಯವಾಗುವಂತೆ ನಿಮ್ಮನ್ನು ಕೆಲಸದಿಂದ ಬಿಡುಗಡೆಗೊಳಿಸಿ ಪ್ರಭಾರವನ್ನು ವಹಿಸಿಕೊಡುವಂತೆ ಸೂಚಿಸಲಾಗಿತ್ತು. ಆದರೆ ನೀವು ಕೆಲವು ಪತ್ರ ವ್ಯವಹಾರಗಳನ್ನು ಮಾತ್ರ ಅವರಿಗೆ ನೀಡಿ, ಸಂಬಂಧಿಸಿದ ಕಡತಗಳನ್ನಾಗಲೀ, ಸೇವಾ ಪುಸ್ತಕಗಳನ್ನಾಗಲೀ ಮತ್ತು ಕಾರ್ಯನಿರ್ವಹಣಾ ವರದಿಗಳನ್ನಾಗಲೀ ಹಾಗೂ ಇನ್ನಿತರ ಯಾವುದೇ ದಾಖಲಾತಿಗಳನ್ನು ನೀಡದೇ ಇದ್ದುದರಿಂದ ನಿಮಗೆ ಅನೇಕ ಸಾರಿ ಮೌಖಿಕವಾಗಿ ತಿಳಿಸಲಾಗಿತ್ತು ಹಾಗೂ ಅಂತಿಮವಾಗಿ ದಿನಾಂಕ 9.6.2008ರಂದು ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರು ಹೊರಡಿಸಿದ ಜ್ಞಾಪನಕ್ಕೂ ನೀವು ಯಾವುದೇ ಪ್ರತಿಕ್ರಿಯೆ ನೀಡಿರುವುದಿಲ್ಲ. ಆಪಾದಿತ ಸರ್ಕಾರಿ ನೌಕರರಾದ ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರಾದ ನೀವು ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಆಡಳಿತ ಮತ್ತು ಲೆಕ್ಕ ವಿಭಾಗಕ್ಕೆ ಸಂಬಂಧಿಸಿದ ಎಲ್ಲಾ ದಾಖಲಾತಿಗಳನ್ನು ವಹಿಸತಕ್ಕದ್ದು ನಿಮ್ಮ ಜವಾಬ್ದಾರಿಯಾಗಿದ್ದರೂ ಪ್ರಭಾರವನ್ನು ವಹಿಸದೇ ಆ ವಿಭಾಗಕ್ಕೆ ಸಂಬಂಧಿಸಿದ ಕರ್ತವ್ಯ ನಿರ್ವಹಣೆಯಲ್ಲಿ ಅಡೆತಡೆಯನ್ನುಂಟು ಮಾಡಿ ಅತ್ಯಂತ ಬೇಜವಾಬ್ದಾರಿ ರೀತಿಯಲ್ಲಿ ವರ್ತಿಸಿ ಸರ್ಕಾರಿ ನೌಕರರೊಬ್ಬರಿಗೆ ಸಲ್ಲದ ರೀತಿಯಲ್ಲಿ ವರ್ತಿಸಿದ್ದರಿಂದ ನಿಮಗೆ ನೀಡಲಾದ ಕಪಾಟಿನ ಬೀಗವನ್ನು ದಿನಾಂಕ 23.5.2008 ರಂದು ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು ಮತ್ತು ಸಿಬ್ಬಂದಿಗಳ ಉಪಸ್ಥಿತಿಯಲ್ಲಿ ಬಲವಂತವಾಗಿ ತೆರೆಯಿಸಿ ನೀವು ನಿರ್ವಹಿಸಿದ್ದ/ ಬಾಕಿ ಇರಿಸಿಕೊಂಡಿದ್ದ ಪತ್ರ ವ್ಯವಹಾರ, ಸಿಬ್ಬಂದಿಗಳ ಸೇವಾ ಪುಸ್ತಕಗಳು, ಕಡತಗಳನ್ನು ಹಾಗೂ ಇನ್ನಿತರ ದಾಖಲಾತಿಗಳನ್ನು (ಒಟ್ಟು 141) ಆ ಕಚೇರಿ ವಶಕ್ಕೆ ಪಡೆದುಕೊಂಡಿದ್ದರಿಂದ ಈ ಪ್ರಕರಣದಲ್ಲಿ ಆಪಾದಿತ ಸರ್ಕಾರಿ ನೌಕರರಾದ ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರಾದ ನೀವು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು 1966ರ ನಿಯಮ 3ನ್ನು ಉಲ್ಲಂಘಿಸಿರುವುದು ಸ್ಪಷ್ಟವಾಗಿ ಸರ್ಕಾರಿ ನೌಕರರೊಬ್ಬರಿಗೆ ಸಲ್ಲದ ರೀತಿಯಲ್ಲಿ ವರ್ತಿಸಿರುತ್ತೀರಿ.

**ಆರೋಪ:3**

ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರಾದ ಹಾಗೂ ಆಪಾದಿತ ಸರ್ಕಾರಿ ನೌಕರರಾದ ನೀವು ರಾಮನಗರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿಯಲ್ಲಿ ಅನ್ಯ ಕರ್ತವ್ಯದ ಮೇಲೆ ನಂತರ ದಿನಾಂಕ 31.1.2008 ರಿಂದ ಅದೇ ಕಚೇರಿಗೆ ವರ್ಗಾವಣೆ ಹೊಂದಿ ಕರ್ತವ್ಯಕ್ಕೆ ವರದಿ ಮಾಡಿಕೊಂಡ ನಂತರ ಕೂಡ ನಿಮ್ಮ ಅನಧಿಕೃತ ಗೈರುಹಾಜರಾತಿ, ಬೇಜವಾಬ್ದಾರಿತನ, ಕರ್ತವ್ಯಲೋಪ ಮತ್ತು ದುರ್ನಡತೆ ಪ್ರವೃತ್ತಿಯನ್ನು ನಿರಂತರವಾಗಿ ಮುಂದುವರೆಸಿದ್ದರಿಂದ ನಿಮ್ಮ ಮನೆ ವಿಳಾಸಕ್ಕೆ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ರಾಮನಗರ ಜಿಲ್ಲೆ ಇವರು ನೀಡಲಾದ ಜ್ಞಾಪನದ ಸಂಖ್ಯೆ:ಜಿಸಂಸಂ/ ರಾಮ/ಆಡಳಿತ/30/2007–08, ದಿನಾಂಕ 15.5.2008ರಲ್ಲಿ ನಿಮ್ಮ ಅನಧಿಕೃತ ಗೈರು ಹಾಜರಾತಿಯಿಂದ ಅವರ ಕಚೇರಿಯ ಸಿಬ್ಬಂದಿಗಳ ಮಾಸಿಕ ವೇತನ ಬಿಲ್ಲು ತಯಾರಿಕೆ ಸಹಿತವಾಗಿ ಆಡಳಿತ ಮತ್ತು ಲೆಕ್ಕ ವಿಭಾಗದ ಕರ್ತವ್ಯ ನಿರ್ವಹಣೆ ಸಂಪೂರ್ಣವಾಗಿ ಸ್ಥಗಿತಗೊಂಡಿರುವುದನ್ನು ವಿವರಿಸಿ, ಕರ್ತವ್ಯಕ್ಕೆ ಹಾಜರಾಗುವಂತೆ ಸೂಚಿಸಲಾಗಿದ್ದರೂ, ನೀವು ಸರ್ಕಾರದ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾತಿಯನ್ನು ಮುಂದುವರೆಸಿದ್ದರಿಂದ, ಕಚೇರಿ ಕಾರ್ಯಗಳ ನಿರ್ವಹಣೆಗಾಗಿ ನಿಮಗೆ ಕಚೇರಿಯಲ್ಲಿ ನೀಡಲಾದ ಕಪಾಟಿನ ಬೀಗವನ್ನು ದಿನಾಂಕ 15.5.2008ರಂದು ರಾಮನಗರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು ಮತ್ತು ಆ ಕಚೇರಿಯ ಸಿಬ್ಬಂದಿಗಳ ಉಪಸ್ಥಿತಿಯಲ್ಲಿ ತೆರೆಯಿಸಿ, ನೀವು ನಿರ್ವಹಿಸುತ್ತಿದ್ದ/ ಬಾಕಿ ಇರಿಸಿಕೊಂಡಿದ್ದ ಪತ್ರ ವ್ಯವಹಾರ, ಸೇವಾ ಪುಸ್ತಕಗಳು, ಕಡತಗಳನ್ನು ಮತ್ತು ಇನ್ನಿತರ ದಾಖಲಾತಿಗಳನ್ನು ಆ ಕಚೇರಿ ವಶಕ್ಕೆ ಪಡೆದುಕೊಂಡು, ಆ ವಿಭಾಗದ ಕರ್ತವ್ಯ ನಿರ್ವಹಣೆ ಮುಂದುವರೆಸಲಾಗಿದೆಯಾದರೂ, ಜವಾಬ್ದಾರಿಯುತವಾದ ಪ್ರಥಮ ದರ್ಜೆ ಸಹಾಯಕರ ಹುದ್ದೆಯಲ್ಲಿದ್ದ ಸರ್ಕಾರಿ ನೌಕರರಾದ ನೀವು ಅತ್ಯಂತ ಬೇಜವಾಬ್ದಾರಿ ರೀತಿಯ ದುರ್ನಡತೆ ಪ್ರದರ್ಶಿಸಿ, ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮ 3ನ್ನು ಸಂಪೂರ್ಣವಾಗಿ ಉಲ್ಲಂಘಿಸಿರುತ್ತೀರಿ.

**ಆರೋಪ:4**

ಆಪಾದಿತ ಸರ್ಕಾರಿ ನೌಕರರಾದ (Accused Government official) ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರಾದ ನೀವು ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿ, ರಾಮನಗರ ಜಿಲ್ಲೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಅದೇ ಕಚೇರಿಯ ದ್ವಿತೀಯ ದರ್ಜೆ ಸಹಾಯಕರಾದ ಶ್ರೀಮತಿ ಆರ್. ಜ್ಯೋತಿ ಇವರ ಅಕ್ಟೋಬರ್ 2007 ರಿಂದ ಫೆಬ್ರವರಿ 2008ರ ವರೆಗಿನ ವೇತನಕ್ಕೆ ಸಂಬಂಧಿಸಿದಂತೆ ಒಟ್ಟು ರೂ.34,774/–ರ ಬಿಲ್ಲನ್ನು ತಯಾರಿಸಿ, ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳಿಂದ ರುಜು ಪಡೆದುಕೊಂಡು ಖಜಾನೆಯಿಂದ ರೂ.34,774/–ಗಳ ಚೆಕ್ ಸ್ವೀಕೃತಿಯಾದ ನಂತರ, ನಿಯಮಾನುಸಾರ ನಗದೀಕರಿಸಿ ಸದರಿ ದ್ವಿತೀಯ ದರ್ಜೆ ಸಹಾಯಕರಿಗೆ ರೂ.32,774/– ಗಳನ್ನು ಮಾತ್ರ ವಿತರಿಸಿ, ಆಪಾದಿತ ಸರ್ಕಾರಿ ನೌಕರರಾದ ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರಾದ ನೀವು ರೂ.2000/–ಗಳಷ್ಟು ಸರ್ಕಾರದ ಹಣವನ್ನು ಸ್ವಂತಕ್ಕಾಗಿ ದುರ್ಬಳಕೆ ಮಾಡಿಕೊಂಡಿದ್ದಲ್ಲದೇ ವೇತನ ಬಟವಾಡೆ ಪುಸ್ತಕದಲ್ಲಿ ರೂ.34,774/– ಎಂದು ಇದ್ದ ಮೊತ್ತವನ್ನು ರೂ.32,774/– ಎಂದು ತಿದ್ದಿ, ಮೇಲಾದಿಕಾರಿಗಳಿಗೆ ದಾರಿ ತಪ್ಪಿಸುವ ಹಾಗೂ ಕಚೇರಿ ಮುಖ್ಯಸ್ಥರಿಗೆ ಮತ್ತು ಸರ್ಕಾರಕ್ಕೆ ಮೋಸ ಮಾಡುವ ದುರುದ್ದೇಶದಿಂದ ಹಣಕಾಸಿನ ವಿಷಯಕ್ಕೆ ಸಂಬಂಧಿಸಿದ ದಾಖಲಾತಿಗಳನ್ನು ನಿಮ್ಮ ಸ್ವಹಿತದೃಷ್ಟಿಯಿಂದ ಬದಲಾಯಿಸಿ, ದಂಡಾರ್ಹ ದುರ್ನಡತೆ (Criminal misconduct) ಪ್ರದರ್ಶಿಸಿ ನಂಬಿಕೆ ದ್ರೋಹ ಎಸಗಿರುತ್ತೀರಿ.

**ಆರೋಪ: 5**

ಆಪಾದಿತ ಸರ್ಕಾರಿ ನೌಕರರಾದ (Accused Government Official) ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರಾದ ನೀವು ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿಯಲ್ಲಿ ಅನ್ಯ ಕರ್ತವ್ಯದ ಮೇಲೆ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ದಿನಾಂಕ 01.12.2008 ರಿಂದ ಹೊಸಕೋಟೆ ತಾಲ್ಲೂಕು ಕಚೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಕು: ವೀಣಾ ಕುಲಕರ್ಣಿ, ಗಣತಿದಾರರಿಂದ ರೂ.5600/– (ರೂ. ಐದು ಸಾವಿರದ ಆರು ನೂರುಗಳು ಮಾತ್ರ) ಗಳನ್ನು ಸರ್ಕಾರದ ಕಚೇರಿಯಲ್ಲಿ ಅನುಷ್ಠಾನಗೊಳಿಸದೇ ಇದ್ದ ಉದ್ದೇಶಕ್ಕಾಗಿ ಪಡೆದುಕೊಂಡಿರುತ್ತೀರೆಂದು, ಸದರಿ ಗಣತಿದಾರರು

ದಿನಾಂಕ 14.5.2008 ರಂದು ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಇವರಿಗೆ ನಿಮ್ಮ ವಿರುದ್ಧ ದೂರು ನೀಡಿರುತ್ತಾರೆ. ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿಯಲ್ಲಿ ಪ್ರಥಮ ದರ್ಜೆ ಸಹಾಯಕರಾಗಿ ಜವಾಬ್ದಾರಿಯುತ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ನೀವು ಆಡಳಿತ ಮತ್ತು ಲೆಕ್ಕ ವಿಷಯಕ್ಕೆ ಸಂಬಂಧಿಸಿದಂತೆ ಸಹದ್ಯೋಗಿಗಳಿಗೆ ಸೂಕ್ತ ಮಾರ್ಗದರ್ಶನ ನೀಡುವ ಬದಲಾಗಿ ಸರ್ಕಾರದ ಕಚೇರಿಗಳಲ್ಲಿ ಇನ್ನು ಅನುಷ್ಠಾನಗೊಳಿಸದೇ ಉದ್ದೇಶಕ್ಕಾಗಿ ಎಂದು ಸಹೋದ್ಯೋಗಿಗಳಿಗೆ ತಪ್ಪು ಮಾಹಿತಿ ನೀಡಿ, ಅವರಿಂದ ಹಣ ವಸೂಲು ಮಾಡಿ ಸಹೋದ್ಯೋಗಿಗಳಿಗೆ ಮತ್ತು ಕಚೇರಿ ಮುಖ್ಯಸ್ಥರಿಗೆ ನಂಬಿಕೆ ದ್ರೋಹ ಎಸಗಿ, ಗಂಭೀರ ಸ್ವರೂಪದ ದುರ್ನಡತೆ ಎಸಗಿರುತ್ತೀರೆಂದು ಸ್ಪಷ್ಟವಾಗಿ ಕಂಡು ಬರುತ್ತದೆ.

**ಆರೋಪ: 6**

ಸದರಿ ಆಪಾದಿತ ಸರ್ಕಾರಿ ನೌಕರರಾದ (Accused Government Official) ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರಾದ ನೀವು ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿ, ರಾಮನಗರ ಜಿಲ್ಲೆ, ಇಲ್ಲಿ ನಿಯೋಜನೆ ಮೇಲೆ ಕರ್ತವ್ಯ ನಿರ್ವಹಿಸುತ್ತಿದ್ದಾಗ 4ನೇ ಆರೋಪದಲ್ಲಿ ವಿವರಿಸಲಾದ ಆ ಕ್ರಮದ ವಿಧಾನದಂತೆ ಮತ್ತೊಂದು ವಂಚನೆ ಪ್ರಕರಣವನ್ನು ಎಸಗಿರುವ ಕುರಿತು ಕುಮಾರಿ ಪಿ. ಮಂಜು, ಗಣತಿದಾರರು, ತಾಲ್ಲೂಕು ಕಚೇರಿ, ರಾಮನಗರ ಜಿಲ್ಲೆ, ಇವರು ದಿನಾಂಕ:26.6.2008 ರಂದು ನಿಮ್ಮ ವಿರುದ್ಧ ನೀಡಿದ ದೂರಿನಲ್ಲಿ ವಿವರಿಸುತ್ತಾ "ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರು, ಇವರು ಡಿ.ಸಿ.ಪಿ.ಎಸ್. ಹಣ ರೂ.2500/–ಗಳನ್ನು ಪಡೆದು ಖಜಾನೆಗೆ ಸಂದಾಯ ಮಾಡಬೇಕೆಂದು ತಿಳಿಸಿದ್ದು, ಅವರಿಗೆ ನಾನು ನವೆಂಬರ್ 2008ರ ಕೊನೆ ದಿನದಂದು ರೂ.2500/– ಗಳನ್ನು ಕೊಟ್ಟಿರುವುದಾಗಿ, ಅದಕ್ಕೆ ಅವರು ನನಗೆ ಯಾವುದೇ ರೀತಿಯ ಸ್ವೀಕೃತಿಯನ್ನು ನೀಡಿರುವುದಿಲ್ಲ" ಎಂದು ಗಂಭೀರ ಸ್ವರೂಪದ ಆರೋಪ ಮಾಡಿದ್ದನ್ನು ಪರಿಗಣಿಸಲಾಗಿ ಆಪಾದಿತ ಸರ್ಕಾರಿ ನೌಕರರಾದ ನೀವು ಸರ್ಕಾರಿ ನೌಕರರೊಬ್ಬರಿಗೆ ಸಲ್ಲದ ರೀತಿಯಲ್ಲಿ ವರ್ತಿಸಿ ನಿಮ್ಮ ಸಹೋದ್ಯೋಗಿಗಳಿಗೆ ಹಾಗೂ ಕಚೇರಿ ಮುಖ್ಯಸ್ಥರಿಗೆ ಹಾಗೂ ಸರ್ಕಾರಕ್ಕೆ ನಂಬಿಕೆ ದ್ರೋಹ ಎಸಗಿ ಕರ್ನಾಟಕ ನಾಗರೀಕ ಸೇವೆ (ನಡತೆ) ನಿಯಮಗಳು 1966ರ ನಿಯಮ 3ನ್ನು ಉಲ್ಲಂಘಿಸಿರುತ್ತೀರಿ.

**ಆರೋಪ: 7**

ಸದರಿ ಆಪಾದಿತ ಸರ್ಕಾರಿ ನೌಕರರಾದ ಹಾಗೂ ಪ್ರಸ್ತುತ ಅಮಾನತ್ತಿನಲ್ಲಿರುವ ಶ್ರೀ ಆದಿಕುಮಾರ, ಪ್ರಥಮ ದರ್ಜೆ ಸಹಾಯಕರಾದ ನೀವು ದಿನಾಂಕ 11.2.2008 ರಂದು ಸಲ್ಲಿಸಿದ ಮನವಿಯಲ್ಲಿ "ದಿನಾಂಕ 31.1.2008ರಂದು ಕೇಂದ್ರ ಕಚೇರಿಯಿಂದ ಬಿಡುಗಡೆ ಹೊಂದಿ ಸೇರಿಕೆ ಕಾಲವನ್ನು ಉಪಯೋಗಿಸಿಕೊಂಡು ದಿನಾಂಕ 11.2.2008 ರಂದು ಪೂರ್ವಾಹ್ನ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿ, ರಾಮನಗರ ಜಿಲ್ಲೆ ಇಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳುತ್ತಿದ್ದೇನೆ" ಎಂದು ನಮೂದಿಸಿ ವರದಿ ಮಾಡಿಕೊಂಡಿದ್ದು, ನಂತರ ಈ ಕೆಳಗೆ ತಿಳಿಸಿದ ದಿನಾಂಕಗಳಂದು ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿರುತ್ತೀರಿ:

1) ದಿನಾಂಕ 01.5.2008 ರಿಂದ 31.5.2008
2) ದಿನಾಂಕ 01.06.2008 ರಿಂದ 30.6.2008.

} ಒಟ್ಟು ಗೈರು ಹಾಜರಾದ ದಿನಗಳು 61

ದಿನಾಂಕ 01.07.2008ರಲ್ಲಿ ನೀವು ಕರ್ತವ್ಯಕ್ಕೆ ನಿಗದಿತ ಸಮಯಕ್ಕೆ ಹಾಜರಾಗದೇ ಇದ್ದುದಕ್ಕಾಗಿ ಅಥವಾ ಅನಧಿಕೃತ ಗೈರು ಹಾಜರಾಗಿದ್ದುದನ್ನು ಪರಿಗಣಿಸಿ, ಆ ದಿನದ ನಿಮ್ಮ ಹಾಜರಾತಿಯನ್ನು (x) ಎಂದು ಹಾಜರಾತಿ ಪುಸ್ತಕದಲ್ಲಿ ಗುರುತಿಸಲಾಗಿದ್ದರೂ, ಕಚೇರಿ ಮುಖ್ಯಸ್ಥರ ಅನುಮತಿ ಪಡೆಯದೆ ಅಥವಾ ಅವರಿಂದ ದೃಢೀಕರಿಸದೆ ದಿನಾಂಕ 1.7.2008 ರಂದು (x) ಎಂದು ಗುರುತಿಸಲಾಗಿದ್ದರೂ, ಅದರ ಕೆಳಗೆ ಸಹಿ ಮಾಡಿ ಗಂಭೀರ ಸ್ವರೂಪದ ಲೋಪ ದೋಷ ಎಸಗಿ ಸರ್ಕಾರಿ ನೌಕರರೊಬ್ಬರಿಗೆ ಸಲ್ಲದ ರೀತಿಯಲ್ಲಿ ವರ್ತಿಸಿರುತ್ತೀರಿ. ದಿನಾಂಕ 08.03.1984ರಂದು ದ್ವಿತೀಯ ದರ್ಜೆ ಸಹಾಯಕರಾಗಿ ಸರ್ಕಾರಿ ಸೇವೆಗೆ ಸೇರಿದ ನೀವು ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿ, ಮೈಸೂರು ನಂತರ ಕೇಂದ್ರ ಕಚೇರಿಯಲ್ಲಿ ಹಲವಾರು ವರ್ಷಗಳ ಸೇವೆ ಸಲ್ಲಿಸಿದ್ದರೂ ಹಾಗೂ ಹೊಸದಾಗಿ ಸರ್ಕಾರಿ ಸೇವೆಗೆ ಸೇರಿದ ಸಿಬ್ಬಂದಿಗಳಿಗೆ ಮಾದರಿಯಾಗಿ (exemplary) ವರ್ತಿಸಿ ಅಂತಹವರಿಗೆ ಸರ್ಕಾರದ ಸೇವೆಗೆ ಸಂಬಂಧಿಸಿದಂತೆ, ಮಾರ್ಗದರ್ಶನ ನೀಡಬಹುದಾದ ನೀವು 24 ವರ್ಷಗಳ ಸೇವೆಯ ನಂತರವೂ ಅನಧಿಕೃತ ಗೈರು ಹಾಜರಾಗುವ ಪ್ರವೃತ್ತಿಯನ್ನು ನಿರಂತರವಾಗಿ ಮುಂದುವರೆಸಿ, ಅತ್ಯಂತ ಬೇಜವಾಬ್ದಾರಿಯ ನಡತೆಯನ್ನು ಪ್ರದರ್ಶಿಸಿ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು 1966 ನಿಯಮ 3ಕ್ಕೆ ವಿರುದ್ಧವಾಗಿ ವರ್ತಿಸಿರುತ್ತೀರಿ.

**ಆರೋಪ: 8**

ಪ್ರಸ್ತುತ ಅಮಾನತ್ತಿನಲ್ಲಿರುವ ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರಾದ ನೀವು ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿಯಲ್ಲಿ ಅನ್ಯ ಕರ್ತವ್ಯದ ಮೇಲೆ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಈ ಕೆಳಗೆ ತಿಳಿಸಲಾದ ಅವಧಿಯಲ್ಲಿ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿರುತ್ತೀರಿ.

ದಿನಾಂಕ 14.5.2007 ರಿಂದ 24.5.2007ರ ಈ ಬಗ್ಗೆ ನಿಮಗೆ ದಿನಾಂಕ 18.5.2007 ರಂದು ಜ್ಞಾಪನ ನೀಡಲಾಗಿದ್ದರೂ ಅದಕ್ಕೆ ವಿವರಣೆ ಸಲ್ಲಿಸಿರುವುದಿಲ್ಲ. ಸ್ವತಃ ನೀವೇ ಕಾರ್ಯನಿರ್ವಾಹಕರಾಗಿದ್ದರಿಂದ, ಅನ್ಯ ಕರ್ತವ್ಯದ ಮೇಲಿದ್ದ ನಿಮ್ಮ ಹಾಜರಾತಿ ಕುರಿತು ಪ್ರತಿ ತಿಂಗಳು ಕೇಂದ್ರ ಕಚೇರಿಗೆ ವೇತನ ನೀಡುವುದಕ್ಕಾಗಿ ಮಾಹಿತಿ ನೀಡಬೇಕಾಗಿದ್ದರೂ, ಉದ್ದೇಶಪೂರ್ವಕವಾಗಿ ಸಲ್ಲಿಸಿರುವುದಿಲ್ಲ. ಅದೇ ಅವಧಿಯಲ್ಲಿ ನಿಮ್ಮನ್ನು ನಂಜನಗೂಡು ಪೋಲೀಸ್ ಠಾಣೆಯಲ್ಲಿ ಇಟ್ಟಿರುವುದಾಗಿ ಮೌಖಿಕವಾಗಿ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿಗೆ ತಿಳಿಸಿದ್ದರಿಂದ ಕರ್ತವ್ಯಕ್ಕೆ ಗೈರು ಹಾಜರಾಗಿ ಸರ್ಕಾರಿ ನೌಕರರಿಗೆ ಸಲ್ಲದ ರೀತಿಯಲ್ಲಿ ವರ್ತಿಸಿರುತ್ತೀರಿ.

**ಆರೋಪ: 9**

ಆಗಸ್ಟ್ 2007ರಲ್ಲಿನ ನಿಮ್ಮ ಅನಧಿಕೃತ ಗೈರು ಹಾಜರಾತಿಯನ್ನು ಮುಚ್ಚಿ ಹಾಕಲು, ಸ್ವತಃ ಜವಾಬ್ದಾರಿಯುತ ಪ್ರಥಮ ದರ್ಜೆ ಸಹಾಯಕರ ಹುದ್ದೆಯಲ್ಲಿದ್ದ ನೀವು ನಿಮಗೆ ವಹಿಸಲಾದ ಸರ್ಕಾರದ ದಾಖಲಾತಿಗಳನ್ನು ಸುರಕ್ಷಿತವಾಗಿಡುವ ಬದಲಾಗಿ ಆಗಸ್ಟ್ 2007ರ ಹಾಜರಾತಿ ಪುಸ್ತಕದ ಭಾಗವನ್ನು ಹರಿದು ಹಾಕಿ ಸರ್ಕಾರಿ ನೌಕರರೊಬ್ಬರಿಗೆ ಸಲ್ಲದ ರೀತಿಯಲ್ಲಿ ವರ್ತಿಸಿರುತ್ತೀರಿ.

**ಆರೋಪ:10**

ಪ್ರಸ್ತುತ ಅಮಾನತ್ತಿನಲ್ಲಿದ್ದ ಸರ್ಕಾರಿ ನೌಕರರಾದ ನೀವು ದಿನಾಂಕ 14.5.2007 ರಿಂದ 24.5.2007ರ ವರೆಗೆ ಅನಧಿಕೃತ ಗೈರು ಹಾಜರಾಗಿದ್ದರಿಂದ ನಿಮಗೆ ವಹಿಸಲಾದ ಆಡಳಿತ ಮತ್ತು ಲೆಕ್ಕ ವಿಭಾಗದ ಕರ್ತವ್ಯಗಳ ನಿರ್ವಹಣೆಯಲ್ಲಿ ಹಾಗೂ ವೈಯಕ್ತಿಕ ಸೇವಾ ವಿಷಯದಲ್ಲಿ ತಡೆ ಉಂಟು ಮಾಡಿ, ಅತ್ಯಂತ ಬೇಜವಾಬ್ದಾಯಾಗಿ ವರ್ತಿಸಿರುತ್ತೀರಿ.

**ಆರೋಪ: 11**

ಪ್ರಸ್ತುತ ಅಮಾನತ್ತಿನಲ್ಲಿದ್ದ ಸರ್ಕಾರಿ ನೌಕರರಾದ ನೀವು ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇಲ್ಲಿ ನಿಯೋಜನೆ ಮೇಲೆ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಈ ಕೆಳಗೆ ತಿಳಿಸಲಾದ ಸರ್ಕಾರದ ಹಣವನ್ನು ದುರುಪಯೋಗಪಡಿಸಿಕೊಂಡಿರುತ್ತೀರಿ:–

1. ಶ್ರೀ ಕೆ.ಸಿದ್ದರಾಜು,ಸಹಾಯಕ ನಿರ್ದೇಶಕರು ಇವರ ಪ್ರವಾಸದ ಬಿಲ್ಲು ಹಣ:

ಅ) ಮೇ 2007 : ರೂ.374–00

ಆ) ಜೂನ್ 2007 : ರೂ.246–00

ಇ) ಜುಲೈ 2007 : ರೂ.164–00

ಈ) ಆಗಸ್ಟ್ 2007 : ರೂ.741–00

2. ತಾಲ್ಲೂಕು ಯೋಜನಾ ಘಟಕಕ್ಕೆ ವರ್ಗಾವಣೆ ಆದೇಶದಲ್ಲಿದ್ದ ಶ್ರೀ ಕೆ. ಸಿದ್ದರಾಜು, ಸಹಾಯಕ ನಿರ್ದೇಶಕರು ಇವರಿಗೆ ಮಂಜೂರಾದ ಹಬ್ಬದ ಮುಂಗಡ ರೂ.2000/– ಗಳನ್ನು ಸರ್ಕಾರಕ್ಕೆ ಜಮಾ ಮಾಡುವಂತೆ ಜವಾಬ್ದಾರಿಯುತ ಪ್ರಥಮ ದರ್ಜೆ ಸಹಾಯಕರಾದ ಹಾಗೂ ಆಡಳಿತ ಮತ್ತು ಲೆಕ್ಕ ವಿಭಾಗದ ಕಾರ್ಯನಿರ್ವಾಹಕರಾದ ನಿಮಗೆ ಅವರು ನೀಡಿದ್ದನ್ನು ಸರ್ಕಾರಕ್ಕೆ ಜಮಾ ಮಾಡದೆ, ಈ ಹಣವನ್ನು ದುರುಪಯೋಗ ಪಡಿಸಿಕೊಂಡಿರುತ್ತೀರಿ.

3. ಈ ನಿರ್ದೇಶನಾಲಯದ ಆದೇಶದ ದಿನಾಂಕ 29.6.2006ರ ಅನ್ವಯ ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿಯಲ್ಲಿ ನಿಯೋಜನೆ ಮೇಲೆ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಸರ್ಕಾರದ ಆದೇಶದ ಸಂಖ್ಯೆ:ಪಿಡಿ/25/ಎಸ್ ಆರ್ ಪಿ/06, ದಿನಾಂಕ 27.7.2006ರಲ್ಲಿ ಮಂಜೂರಾದ ತುಟ್ಟಿ ಭತ್ಯೆಯ ಬಾಕಿಯನ್ನು ಈ ಕೆಳಗೆ ತಿಳಿಸಲಾದ ಅಧಿಕಾರಿಗಳಿಗೆ ವಿತರಿಸದೇ ಸರ್ಕಾರದ ಹಣವನ್ನು ದುರುಪಯೋಗ ಪಡಿಸಿಕೊಂಡಿರುತ್ತೀರಿ.

ಅ) ಸಹಾಯಕ ನಿರ್ದೇಶಕರಾಗಿದ್ದ ಶ್ರೀ ಕೆ. ಸಿದ್ದರಾಜು : ರೂ.879–00

ಆ) ಸ್ವತಃ ಕಚೇರಿ ಮುಖ್ಯಸ್ಥರಾಗಿದ್ದ ಶ್ರೀ ಬಿ. : ರೂ.505–00

ಶ್ರೀನಿವಾಸಾಚಾರ್, ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು ಇವರ ನವೆಂಬರ್ ತಿಂಗಳಿನ ವೇತನ ವ್ಯತ್ಯಾಸ (ಈ ಹಣವನ್ನು ದುರುಪಯೋಗ ಪಡಿಸಿಕೊಳ್ಳುವ ಉದ್ದೇಶದಿಂದ ನೀವು ಸ್ವತಃ ತಯಾರಿಸಿದ ಬಿಲ್ಲಿನಲ್ಲಿ ಯಾವ ವಿಷಯ ಎಂದು ನಮೂದಿಸಿರುವುದಿಲ್ಲ)

**ಆರೋಪ: 12**

ಪ್ರಸ್ತುತ ಅಮಾನತ್ತಿನಲ್ಲಿರುವ ಪ್ರಥಮ ದರ್ಜೆ ಸಹಾಯಕರಾದ ಶ್ರೀ ಆದಿಕುಮಾರ್, ಆದ ನೀವು 2004ನೇ ಸಾಲಿನಲ್ಲಿ ಕೇಂದ್ರ ಕಚೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಶ್ರೀಮತಿ ಗಿರಿಯಮ್ಮ, ಗಣತಿದಾರರಿಗೆ ಸಂಬಂಧಿಸಿದ ಕಡತವನ್ನು ಪರಿಶೀಲಿಸುವಲ್ಲಿ ಎಸಗಿದ ಲೋಪದೋಷಗಳ ಕುರಿತು ನಿಮಗೆ ನೀಡಲಾದ ಜ್ಞಾಪನದ ದಿನಾಂಕ:05.01.2007ಕ್ಕೆ ಸಂಬಂಧಿಸಿದಂತೆ, ದಿನಾಂಕ 29.10.2007ರಂದು ನೀಡಿದ ನಿಮ್ಮ ವಿವರಣೆಯಲ್ಲಿ "ನೀವು ಯಾವುದೇ ಲೋಪದೋಷಗಳನ್ನು ಎಸಗದೆ ಇದ್ದಾಗಲೂ, ನಿಮ್ಮ ಮೇಲಿನ ವೈಯಕ್ತಿಕ ದ್ವೇಷ ಮತ್ತು ಸೇಡಿನಿಂದ ಆ ಜ್ಞಾಪನವನ್ನು ನಿಮಗೆ ನೀಡುವಂತೆ ಮಾಡಿದ್ದರಿಂದ ನಿಮಗೆ ಮಾನಸಿಕ ಹಿಂಸೆಯಾಗಿದ್ದು ನಿಮ್ಮ ಕುಟುಂಬದವರೆಲ್ಲರೊಂದಿಗೆ ಆತ್ಮಹತ್ಯೆ ಮಾಡಿಕೊಳ್ಳುತ್ತೇನೆಂದು ಹಾಗೂ ಸದರಿ ಅವರಿಗೆ ಮಾನಸಿಕ ಹಿಂಸೆ ನೀಡುತ್ತಿರುವವರೇ ನಿಮ್ಮ ಆತ್ಮಹತ್ಯೆಗೆ ಕಾರಣರಾಗುತ್ತಾರೆಂದು ನಿಮಗೆ ಜ್ಞಾಪನ ನೀಡಿದ ಇಲಾಖಾ ಮುಖ್ಯಸ್ಥರಿಗೆ ಹೆದರಿಸುವ (Black mail) ನಿಮ್ಮ ವರ್ತನೆಯು ಸರ್ಕಾರಿ ನೌಕರರೊಬ್ಬರಿಗೆ ಸಲ್ಲದ ರೀತಿಯಲ್ಲಿರುತ್ತದೆ. ಕೇಂದ್ರ ಕಚೇರಿಯಿಂದ ನಿಮ್ಮನ್ನು ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿಗೆ ನಿಯೋಜಿಸಿದ/ ವರ್ಗಾವಣೆ ಮಾಡಿದ ನಂತರವೂ ನಿಮ್ಮ ಅನಧಿಕೃತ ಗೈರು ಹಾಜರಾತಿ, ಕರ್ತವ್ಯಲೋಪ, ದುರ್ನಡತೆ, ಸರ್ಕಾರದ ಹಣದ ದುರಪಯೋಗ ನಿರಂತರವಾಗಿ ಆ ಕಚೇರಿಯಲ್ಲಿಯೂ ಮುಂದುವರೆದಿದ್ದರಿಂದ ನಿಮಗೆ ಹಲವಾರು ಜ್ಞಾಪನಗಳನ್ನು ನೀಡುವ, ನಿಮ್ಮನ್ನು ಸೇವೆಯಿಂದ ಅಮಾನತ್ತು ಗೊಳಿಸುವಂತಹ ಪರಿಸ್ಥಿತಿಗೆ ಸ್ವತಃ ನೀವೇ ಕಾರಣರಾಗಿದ್ದರಿಂದ, ಈ ಎಲ್ಲಾ ಕಾರಣಗಳಿಂದಾಗಿ ಮಾನಸಿಕ ಹಿಂಸೆ ಎಂದು ಪರಿಗಣಿಸಿಕೊಂಡು ಆತ್ಮಹತ್ಯೆ ಮಾಡಿಕೊಂಡಿದ್ದಲ್ಲಿ ಅದು ನಿಮ್ಮ Cognizable offence ಎಂದು (ತಕ್ಷಣ ಪೋಲೀಸಿನವರು ದಸ್ತಗಿರಿ ಮಾಡಬಹುದಾದ ಅಪರಾಧ) ಪರಿಗಣಿಸುವಂತೆ ಸೂಚಿಸಲಾಗಿತ್ತು ಹಾಗೂ ಶ್ರೀಮತಿ ಗಿರಿಯಮ್ಮ, ಗಣತಿದಾರರು ಇವರ ಖಾಯಂಪೂರ್ವ ಅವಧಿಯನ್ನು ಘೋಷಿಸುವ ಪ್ರಕರಣಕ್ಕೆ ಸಂಬಂಧಿಸಿದಂತೆ, ನಿಮಗೆ ನೀಡಲಾದ ಜ್ಞಾಪನಕ್ಕೆ ವಿವರಣೆ ನೀಡುವಂತೆ ಸೂಚಿಸಲಾಗಿದ್ದರೂ, ನಿಮ್ಮ ವಿವರಣೆ ನೀಡಿರುವುದಿಲ್ಲ. ಆಪಾದಿತ ಸರ್ಕಾರಿ ನೌಕರರಾದ ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರು (ಪ್ರಸ್ತುತ ಅಮಾನತ್ತಿನಲ್ಲಿ) ಆದ ನಿಮ್ಮ ವಿರುದ್ಧ ಮೇಲೆ ತಿಳಿಸಲಾದ ಎಲ್ಲಾ ಆರೋಪಗಳಿಗೆ ಸಂಬಂಧಿಸಿದಂತೆ ವಿಶೇಷವಾಗಿ ರಾಮನಗರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿಯಲ್ಲಿ ಕುಮಾರಿ ಆರ್. ಜ್ಯೋತಿ,

ದ್ವಿತೀಯ ದರ್ಜೆ ಸಹಾಯಕರು ಇವರಿಗೆ ವೇತನ ನೀಡುವ ವಿಷಯದಲ್ಲಿ ದಾಖಲಾತಿಗಳನ್ನು ನಿಮ್ಮ ಸ್ವಹಿತ ದೃಷ್ಟಿಯಿಂದ ದುರುದ್ದೇಶಪೂರ್ವಕವಾಗಿ ಬದಲಾಯಿಸಿ (tempering of Government records) ಗಂಭೀರ ಸ್ವರೂಪದ ದುರ್ನಡತೆ ಪ್ರದರ್ಶಿಸಿ (Criminal Misconduct) ಸರ್ಕಾರಕ್ಕೆ ನಂಬಿಕೆ ದ್ರೋಹ ಎಸಗಿರುವುದರಿಂದ ಹಾಗೂ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿ, ರಾಮನಗರ ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲೆ ಇಲ್ಲಿ ನಿರಂತರವಾಗಿ ಅಧಿಕೃತ ಗೈರು ಹಾಜರಾಗಿ, ಕರ್ತವ್ಯ ಲೋಪ, ಬೇಜವಾಬ್ದಾರಿತನ ಮತ್ತು ದುರ್ನಡತೆ ಪ್ರದರ್ಶಿಸಿ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು 1986ರ ನಿಯಮ–3 ನ್ನು ಉಲ್ಲಂಘಿಸಿದ್ದರಿಂದ ನಿಮ್ಮ ವಿರುದ್ಧ ಇಲಾಖಾ ವಿಚಾರಣೆ ಏರ್ಪಡಿಸಲು ಉದ್ದೇಶಿಸಲಾಗಿದೆ.

ಆಪಾದಿತ ಸರ್ಕಾರಿ ನೌಕರರು (AGO-Accused Government official) ದಿನಾಂಕ 13.10.2008ರಂದು ಮೇಲೆ ವಿವರಿಸಲಾದ ಅವರ ಮೇಲಿನ ಆಪಾದನೆಗಳನ್ನೊಳಗೊಂಡ ಉಲ್ಲೇಖ(5)ರಲ್ಲಿನ ಕಾರಣ ಕೇಳುವ ಜ್ಞಾಪನವನ್ನು ಸ್ವೀಕರಿಸಿದ ನಂತರ, ಉಲ್ಲೇಖ(6)ರಲ್ಲಿನ ದಿನಾಂಕ 27.10.2008ರಂದು ಸಲ್ಲಿಸಿದ ಅವರ ಮನವಿಯಲ್ಲಿ ಅವರ ವಿರುದ್ಧ ಹೊರಿಸಲಾದ 12–ಆರೋಪಗಳನ್ನೊಳಗೊಂಡ **"ಕಾರಣ ಕೇಳುವ ಜ್ಞಾಪನಕ್ಕೆ"** ಉತ್ತರಿಸಲು ದಾಖಲಾತಿಗಳನ್ನು ಸಂಬಂಧಿಸಿದ ಕಚೇರಿಗಳಿಂದ ಪಡೆದು ಸಲ್ಲಿಸಬೇಕಾಗಿರುವುದರಿಂದ, ಹಾಗೂ ಈ ಬಗ್ಗೆ **"ಕಾನೂನು ತಜ್ಞರಿಂದ"** ಸಲಹೆ ಪಡೆಯ ಬೇಕಾಗಿದ್ದರಿಂದ, ಅವರಿಗೆ ಈಗಾಗಲೇ ನೀಡಲಾದ 15 ದಿನಗಳ ನಂತರ 1–ತಿಂಗಳು ಕಾಲಾವಕಾಶ ನೀಡಬೇಕೆಂದು ಸಲ್ಲಿಸಿದ ಕೋರಿಕೆಯನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ:11ರ ಉಪ ನಿಯಮಗಳ ಅನ್ವಯ ಹಾಗೂ, ಅದೇ ನಿಯಮಗಳ ನಿಯಮ 11(4)ರ ಅನ್ವಯ, ಪರಿಶೀಲಿಸಿ, ಆರೋಪಿತ ಸರ್ಕಾರಿ ನೌಕರನಿಗೆ (AGO) **"ಆರೋಪ ಪಟ್ಟಿ"** ಜಾರಿ ಮಾಡಿದ ನಂತರ ನಿಗದಿಪಡಿಸಲಾದ ಅವದಿಯ ಒಳಗಾಗಿ ಆತನನ್ನು ರಕ್ಷಿಸಿಕೊಳ್ಳಬೇಕಾದ ಲಿಖಿತ ಹೇಳಿಕೆಯನ್ನು ನಿಗದಿತ ಅವಧಿಯೊಳಗಾಗಿ ಸಲ್ಲಿಸದೇ ಇದ್ದಲ್ಲಿ, ಆತನು ಏನೂ ಹೇಳುವುದಿಲ್ಲವೆಂದು ಪರಿಗಣಿಸಿ, ಇಲಾಖಾ ವಿಚಾರಣೆ ಏರ್ಪಡಿಸಬಹುದಾಗಿದ್ದರಿಂದ, ಕಾಲಾವಕಾಶ ನೀಡುವಂತೆ ಸಲ್ಲಿಸಲಾಗಿದ್ದ ಸದರಿಯವರ ಕೋರಿಕೆಯನ್ನು ತಿರಸ್ಕರಿಸಬಹುದಾಗಿತ್ತಾದರೂ, ನೈಸರ್ಗಿಕ ನ್ಯಾಯದ ತತ್ವದ ದೃಷ್ಟಿಯಿಂದ (in the interest of principles of natural justice) ಅವರ ಲಿಖಿತ ಹೇಳಿಕೆ ಸಲ್ಲಿಸಲು ಈ ನಿರ್ದೇಶನಾಲಯದ ಇದೇ ಕ್ರಮಾಂಕದ ಜ್ಞಾಪನದ ದಿನಾಂಕ 7.11.2008ರಲ್ಲಿ ಅವರಿಗೆ 15 ದಿನಗಳ ಕಾಲಾವಕಾಶ ನೀಡಲಾಗಿತ್ತು ಹಾಗೂ "ಸದರಿ ಪ್ರಥಮ ದರ್ಜೆ ಸಹಾಯಕರ ವಿರುದ್ಧದ ಆರೋಪಗಳಿಗೆ ಸಂಬಂಧಿಸಿದ ದಾಖಲಾತಿಗಳನ್ನು ನಾಶ ಪಡಿಸಬಾರದೆಂಬ ಉದ್ದೇಶದಿಂದ ಸದರಿ ಆಪಾದಿತ ಸರ್ಕಾರಿ ನೌಕರರನ್ನು ಸರ್ಕಾರದ ಸೇವೆಯಿಂದ ಅಮಾನತ್ತುಗೊಳಿಸಲಾಗಿದ್ದರಿಂದ, ನಿಯಮಗಳ ಅನ್ವಯ, ಯಾವುದೇ ದಾಖಲಾತಿಗಳನ್ನು ಸಂಬಂಧಿಸಿದ ಕಚೇರಿಗಳಿಂದ ಆಪಾದಿತ ಸರ್ಕಾರಿ ನೌಕರರು, ಈ ಹಂತದಲ್ಲಿ ಪಡೆಯಲು ಅವಕಾಶವಿಲ್ಲವಾದ್ದರಿಂದ, ಹಾಗೂ ಸದರಿ ಅಮಾನತ್ತಿನಲ್ಲಿದ್ದ ಸರ್ಕಾರಿ ನೌಕರರು ಜೀವನಾಂಶ ಭತ್ಯೆಗಾಗಿ ಮತ್ತು ಪತ್ರ ವ್ಯವಹಾರಗಳ ಉದ್ದೇಶಕ್ಕಾಗಿ ಮನೆ ವಿಳಾಸವನ್ನು ತಿಳಿಸುವುದು ಕಡ್ಡಾಯವಾಗಿದ್ದರೂ, ಸದರಿಯವರು **ದಿನಾಂಕ 25.8.2008ರಂದು ಸರ್ಕಾರಕ್ಕೆ** ಹಾಗೂ, **ದಿನಾಂಕ:18.10.2008ರಂದು** ಮತ್ತು **ದಿನಾಂಕ:27.10.2008ರಂದು** ಈ ನಿರ್ದೇಶನಾಲಯಕ್ಕೆ ಸಲ್ಲಿಸಿದ್ದ ಅವರ ಮನವಿಗಳಲ್ಲಿ ಅವರ ಮನೆ ವಿಳಾಸ ನಮೂದಿಸದೇ ಸಲ್ಲಿಸಿದ್ದನ್ನು ತೀವ್ರವಾಗಿ ಪರಿಗಣಿಸಿ, ಇದೊಂದು ಅವರ **"ದುರ್ನಡತೆ"** ಎಂದು ಪರಿಗಣಿಸಲಾಗಿದ್ದು, ಸದರಿ ಅವರ ಮನೆ ವಿಳಾಸವನ್ನು ಕೇಂದ್ರ ಕಚೇರಿಗೆ ಸಲ್ಲಿಸುವಂತೆ ಸೂಚಿಸಲಾಗಿತ್ತು. ಅಮಾನತ್ತಿನಲ್ಲಿದ್ದ ಈ ಆಪಾದಿತ ಸರ್ಕಾರಿ ನೌಕರರು ದಿನಾಂಕ 25.8.2008ರಂದು ಸರ್ಕಾರಕ್ಕೆ ಹಾಗೂ ದಿನಾಂಕ 27.10.2008 ರಂದು ಸಲ್ಲಿಸಿದ್ದ ಅವರ ಮನವಿಗಳನ್ನು ಪರಿಶೀಲಿಸಲಾಗಿ ಈ ಆಪಾದಿತ ಸರ್ಕಾರಿ ನೌಕರರನ್ನು ಅಮಾನತ್ತಿನಲ್ಲಿದ್ದ ಅವಧಿಯಲ್ಲಿ, ಆತನನ್ನು ಸಂಪರ್ಕಿಸಲು ಅಥವಾ ಆತನಿಗೆ ಯಾವುದೇ ಜ್ಞಾಪನ/ ಪತ್ರ ವ್ಯವಹಾರಗಳು, ತಲುಪದೆ ಇರುವಂತೆ ದುರುದ್ದೇಶಪೂರ್ವಕವಾಗಿ ಅವರ ಅಮಾನತ್ತಿನಲ್ಲಿದ್ದ ಅವದಿಯಲ್ಲಿ ಆತನ ಮನೆ ವಿಳಾಸವನ್ನು ಯಾವುದೇ ಪತ್ರ ವ್ಯವಹಾರಗಳಲ್ಲಿ ತಿಳಿಸದೇ, ಮೇಲಾಧಿಕಾರಿಗಳನ್ನು ಮತ್ತು ಶಿಸ್ತು ಪ್ರಾಧಿಕಾರವನ್ನು ನಿರಂತರವಾಗಿ ತಪ್ಪುದಾರಿಗೆ ಎಳೆಯುವ ಹಾಗೂ ಅವರ ವಿರುದ್ಧ ಉದ್ದೇಶಿಸಲಾಗಿದ್ದ ಇಲಾಖಾ ವಿಚಾರಣೆಯ ದಾರಿಯನ್ನು ತಪ್ಪಿಸುವ ಪ್ರಯತ್ನವನ್ನು ನಿರಂತರವಾಗಿ ಈ ಆರೋಪಿತ ನೌಕರರು ಎಸಗಿರುತ್ತಾರೆ.

ಮೇಲೆ ವಿವರಿಸಲಾದ ಅಂಶಗಳನ್ನು ಪುನರುಚ್ಚರಿಸುತ್ತಾ ಹಾಗೂ ಈ ಇಲಾಖಾ ವಿಚಾರಣೆಯ ದಾರಿಯನ್ನು ತಪ್ಪಿಸಬಹುದಾದ ದುರುದ್ದೇಶದಿಂದ, ಅಮಾನತ್ತಿನಲ್ಲಿದ್ದ ಆರೋಪಿತ ನೌಕರರು, ಉಲ್ಲೇಖ(5)ರಲ್ಲಿರುವ ಅವರ ಮನವಿ ದಿನಾಂಕ 27.10.2008 ಹಾಗೂ, ಅದಕ್ಕೆ ಪ್ರತ್ಯುತ್ತರವಾಗಿ ಹೊರಡಿಸಲಾಗಿದ್ದ ದಿನಾಂಕ 7.11.2008ರಂದು ಹೊರಡಿಸಲಾದ ಉಲ್ಲೇಖ (7)ರಲ್ಲಿರುವ ಜ್ಞಾಪನವನ್ನು ಉಲ್ಲೇಖಿಸದೆ, ಹಾಗೂ ಅವರ ಮನೆ ವಿಳಾಸ ನೀಡದೆ "ನಿರ್ದೇಶಕರು ಮತ್ತು ಶಿಸ್ತು ಪ್ರಾಧಿಕಾರ" ಎಂದು ನಮೂದಿಸಿ ಉಲ್ಲೇಖ(8)ರಲ್ಲಿನ ದಿನಾಂಕ 25.11.2008ರಂದು ಸಲ್ಲಿಸಿದ್ದ ಅವರ ಇನ್ನೊಂದು ಮನವಿಯಲ್ಲಿ ಉಲ್ಲೇಖ(5)ರಲ್ಲಿನ ದಿನಾಂಕ 27.10.2008ರ ಅವರ ಮನವಿಯಲ್ಲಿನ ಅಂಶಗಳನ್ನು ಪುನರುಚ್ಚರಿಸಿದ್ದರಿಂದ, ಈ ನಿರ್ದೇಶನಾಲಯದ ಜ್ಞಾಪನದ ದಿನಾಂಕ 22.12.2008ನ್ನು ಹೊರಡಿಸಿ, ಈ ಆಪಾದಿತ ಸರ್ಕಾರಿ ನೌಕರರು, ಅವರ ಅಮಾನತ್ತಿನಲ್ಲಿದ್ದ ಅವಧಿಯಲ್ಲಿ ಅವರ ಮನೆ ವಿಳಾಸವನ್ನು ನೀಡದೆ ಇರುವುದರ ಕುರಿತು ವಿವರಿಸಲಾಗಿತ್ತು. ಹಾಗೂ ಅದೇ ಜ್ಞಾಪನದಲ್ಲಿ ಅಮಾನತ್ತಿನಲ್ಲಿದ್ದ ಈ ಆರೋಪಿತ ಸರ್ಕಾರಿ ನೌಕರನ ದಿನಾಂಕ 25.11.2008ರ ಮನವಿಗೆ ಸಂಬಂಧಿಸಿದಂತೆ "ಸರ್ಕಾರದ ಕಚೇರಿ ಕಾರ್ಯವಿಧಾನಗಳ ನಿಯಮಗಳನ್ವಯ (as per office procedure) ಆತನ ಕೋರಿಕೆಯನ್ನು ಕಚೇರಿಯಲ್ಲಿ ಸ್ವೀಕರಿಸಿರುವ ಕುರಿತು ಕಚೇರಿ ಸೀಲು/ ದಿನಾಂಕ ನಮೂದಿಸದೇ ಹಾಗೂ ಸಾಮಾನ್ಯ ಸ್ವೀಕೃತಿ ವಹಿಯಲ್ಲಿ ದಾಖಲಿಸದೆ ಕೇಂದ್ರ ಕಚೇರಿಗೆ ಸಲ್ಲಿಸಿದ್ದನ್ನು ತೀವ್ರವಾಗಿ ಪರಿಗಣಿಸಿ, ಕಚೇರಿ ಕಾರ್ಯ ವಿಧಾನಗಳನ್ನು ಅನುಸರಿಸುವಂತೆ ರಾಮನಗರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿಗೆ ಎಚ್ಚರಿಕೆ ನೀಡಲಾಗಿತ್ತು.

ಮೇಲಿನ ಕಂಡಿಕೆಗಳಲ್ಲಿ ವಿವರಿಸಿದಂತೆ, ಆಪಾದಿತ ಸರ್ಕಾರಿ ನೌಕರರು, ಆತನ ವಿರುದ್ಧದ **12– ಆರೋಪಗಳಿಗೆ ಸಂಬಂಧಿಸಿದಂತೆ,** ಆತನ ಮೇಲಿನ ಆರೋಪಗಳನ್ನು ನಿರ್ಧಿಷ್ಟವಾಗಿ ಒಪ್ಪಿಕೊಂಡಿರುವ ಕುರಿತು ಅಥವಾ ನಿರಾಕರಿಸಿರುವ ಕುರಿತು ಆತನ ಲಿಖಿತ ವಿವರಣೆಯನ್ನು ಸಲ್ಲಿಸದೆ ಅನಗತ್ಯವಾದ ಪತ್ರ ವ್ಯವಹಾರಗಳನ್ನು ಮುಂದುವರೆಸಿ, ದಿನಾಂಕ 5.1.2009ರ ಅವರ ಇನ್ನೊಂದು ಮನವಿಯಲ್ಲಿ ಇನ್ನಿತರ ವಿಷಯಗಳೊಂದಿಗೆ **"ನನ್ನ**

**ರಕ್ಷಣಾ ಹೇಳಿಕೆ ನೀಡಲು 15 ದಿನಗಳ ಕಾಲಾವಕಾಶವನ್ನು ನೀಡಲಾಗಿದೆ** ಎಂದು ಸದರಿ ಜ್ಞಾಪನವನ್ನು ತಿಳಿಸಿ ನಾನು ನನ್ನ ರಕ್ಷಣಾ ಹೇಳಿಕೆ ನೀಡಲು ದಾಖಲಾತಿಗಳನ್ನು ಪಡೆಯಲು ಅವಕಾಶವಿಲ್ಲವಾದ್ದರಿಂದ ನನ್ನ ಕೋರಿಕೆಯನ್ನು ತಿರಸ್ಕರಿಸಲಾಗಿದೆ ಎಂದೂ ತಿಳಿಸಲ್ಪಟ್ಟಿದೆ. ಆದರೆ ನನ್ನ ವಿರುದ್ಧ ನಿರ್ಧಿಷ್ಟ ಆರೋಪಗಳಿಗೆ ಸೂಕ್ತ ದಾಖಲಾತಿಗಳೇ ಇಲ್ಲದೇ ನಾನು ಈ ಬಗ್ಗೆ ನನ್ನ ರಕ್ಷಣಾ ಹೇಳಿಕೆ ನೀಡಲು ಹೇಗೆ ಸಾದ್ಯ? ಎಂದು ಶಿಸ್ತು ಪ್ರಾಧಿಕಾರವನ್ನು ಪ್ರಶ್ನಿಸಿದ್ದನ್ನು ನಿಯಮಾನುಸಾರ ಪರಿಶೀಲಿಸಿ, ಈ ನಿರ್ದೇಶನಾಲಯದ ಇದೇ ಕ್ರಮಾಂಕದ ಜ್ಞಾಪನದ ದಿನಾಂಕ 4.2.2009ರಲ್ಲಿ ಈ ಕೆಳಗಿನಂತೆ ಸೂಚಿಸಲಾಗಿತ್ತು.

"ಆಪಾದಿತ ಸರ್ಕಾರಿ ನೌಕರರಾದ ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರು ಸಲ್ಲಿಸಿದ ಅವರ ಮನವಿ ದಿನಾಂಕ 27.10.2008ನ್ನು ಹಾಗೂ ದಿನಾಂಕ 25.11.2008ನ್ನು ನಿಯಮಾನುಸಾರ ಪರಿಶೀಲಿಸಿ, ಅನುಕ್ರಮವಾಗಿ ಅದೇ ಕ್ರಮಾಂಕದ ಜ್ಞಾಪನದ ದಿನಾಂಕ 7.11.2008ರಲ್ಲಿ ಮತ್ತು ಅದೇ ಕ್ರಮಾಂಕದ ಜ್ಞಾಪನದ ದಿನಾಂಕ 22.12.2008ರಲ್ಲಿ ಈ ಹಂತದಲ್ಲಿ ಸದರಿಯವರಿಗೆ ಯಾವುದೇ ದಾಖಲಾತಿಗಳನ್ನು ಸಂಬಂಧಿಸಿದ ಕಚೇರಿಗಳಿಂದ ಪಡೆಯಲು ಅವಕಾಶವಿಲ್ಲವೆಂದು ಸ್ಪಷ್ಟಪಡಿಸಿದ್ದಾಗ್ಯೂ, ಅವರ ವಿರುದ್ಧದ ಆರೋಪಗಳಿಗೆ ಸಂಬಂಧಿಸಿದಂತೆ, ಅವರ ರಕ್ಷಣಾ ಹೇಳಿಕೆಯನ್ನು ಅಂದರೆ, ಅವರ ವಿರುದ್ಧದ ಆರೋಪಗಳನ್ನು ಒಪ್ಪಿರುವ ಅಥವಾ ಒಪ್ಪದೇ ಇರುವ ಲಿಖಿತ ಹೇಳಿಕೆಗಳನ್ನು ಸಲ್ಲಿಸುವುದನ್ನು ಅನಾವಶ್ಯಕವಾಗಿ ಮುಂದೂಡುವ ಉದ್ದೇಶದಿಂದ ಹಾಗು ಇಲಾಖಾ ವಿಚಾರಣೆಯ ದಾರಿಯನ್ನು ತಪ್ಪಿಸುವ ದುರುದ್ದೇಶದಿಂದ ದಾಖಲಾತಿಗಳನ್ನು ಒದಗಿಸುವಂತೆ ದಿನಾಂಕ 5.1.2009ರಂದು ಸಲ್ಲಿಸಿದ ಅವರ ಕೋರಿಕೆಯನ್ನು, ಈ ಕೆಳಗೆ ವಿವರಿಸಲಾದ ನಿಯಮಗಳನ್ವಯ ಪರಿಶೀಲಿಸಿ ಅವರ ಕೋರಿಕೆಯನ್ನು ತಿರಸ್ಕರಿಸಲಾಗಿತ್ತು:–

1) As per Rule:11(4) of KCS (CCA) Rules, 1957:- the Disciplinary Authority shall deliver or cause to be delivered to the Government servant a copy of the articles of charges, the statement of the imputations of mis conduct or mis behaviour and a list of documents and witnesses by which each article of charge is proposed to be sustained and shall require the Government Servant to submit, within such time as may be specified a written statement of his defence

(2) As per Rule 11(5) of KCS (CCA) Rules, 1957: If no defence statement is submitted by the Government Servant, the Disciplinary Authority may itself inquire into the articles of charges or may, if it considers it necessary to do so, appoint under Sub rule(2) an enquiry Authority for the purpose.

ಅಂದರೆ ಆಪಾದಿತ ಸರ್ಕಾರಿ ನೌಕರನ ವಿರುದ್ಧ ಇಲಾಖಾ ವಿಚಾರಣೆಗೆ ಆದೇಶಿಸಿದ್ದಲ್ಲಿ, ಆರೋಪ ಪಟ್ಟಿಯ ಅನುಬಂಧ–3ರಲ್ಲಿನ ದಾಖಲಾತಿಗಳನ್ನು, ಆಪಾದಿತ ಸರ್ಕಾರಿ ನೌಕರನಿಗೆ ವಿಚಾರಣಾ ಸಂದರ್ಭದಲ್ಲಿ ದಾಖಲಾತಿಗಳನ್ನು ಪರಿಶೀಲಿಸಲು ಮೇಲಿನ ನಿಯಮಗಳಲ್ಲಿ ಅವಕಾಶ ಒದಗಿಸಿದ್ದರಿಂದ, ಹಾಗೂ ಆತನ ವಿರುದ್ಧದ ಪ್ರಮುಖವಾದ ಆರೋಪಗಳಲ್ಲಿ **"ಶ್ರೀಮತಿ ಆರ್. ಜ್ಯೋತಿ, ದ್ವಿತೀಯ ದರ್ಜೆ ಸಹಾಯಕರು ಇವರಿಗೆ** ವಾಸ್ತವವಾಗಿ ಬಟವಾಡೆ ಮಾಡಬೇಕಾದ ರೂ.34,774/– ನ್ನು ರೂ.32,774/– ಎಂದು ಆಪಾದಿತ ಸರ್ಕಾರಿ ನೌಕರರಾದ ಶ್ರೀ ಆದಿಕುಮಾರ್, ಅವರು ವೇತನ ವಹಿಯಲ್ಲಿ ತಿದ್ದಿರುವ ಕುರಿತು, ಹಾಗೂ ಅವರಿಗೆ ರೂ.32,774/–ನ್ನು ಮಾತ್ರ ಬಟವಾಡೆ ಮಾಡಿ, ರೂ.2000/–ಗಳನ್ನು ದುರುಪಯೋಗ ಪಡಿಸಿಕೊಂಡಿರುವ ಕುರಿತು ಕಚೇರಿ ಮುಖ್ಯಸ್ಥರು ವರದಿ ಮಾಡಿದ ದಾಖಲೆಯನ್ನು, ಅದೇ ರೀತಿ, ಅದೇ ಆರೋಪಿ ಸರ್ಕಾರಿ ನೌಕರರಾದ ಶ್ರೀ ಆದಿಕುಮಾರ್ ಅವರು ಬೆಂಗಳೂರು (ಗ್ರಾಮಾಂತರ) ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿಯಲ್ಲಿ ಅನ್ಯ ಕರ್ತವ್ಯದ ಮೇಲೆ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಹಾಗೂ ನಂತರ ರಾಮನಗರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಸರ್ಕಾರದ ಕಚೇರಿಯಲ್ಲಿ ಅನುಷ್ಠಾನಗೊಳಿಸದೇ ಇದ್ದ ಉದ್ದೇಶಕ್ಕಾಗಿ ಶ್ರೀಮತಿ ವೀಣಾ ಕುಲಕರ್ಣಿ, ಗಣತಿದಾರರು, ಹೊಸಕೋಟೆ ತಾಲ್ಲೂಕು, ಮತ್ತು ಶ್ರೀಮತಿ ಪಿ.ಮಂಜು, ಗಣತಿದಾರರು, ರಾಮನಗರ ಇವರಿಗೆ ವಂಚನೆ ಮಾಡಿ, ರೂ.5600/–ಗಳನ್ನು, ಹಾಗೂ ರೂ.2500/–ಗಳನ್ನು ಅವರಿಂದ ಅನಧಿಕೃತವಾಗಿ ಪಡೆದುಕೊಂಡಿದ್ದರ ಕುರಿತು, ಆ ಮಹಿಳಾ ಸಿಬ್ಬಂದಿಗಳು ದಿನಾಂಕ 14.5.2008 ರಂದು ಹಾಗೂ ದಿನಾಂಕ 26.6.2008ರಂದು ಸಲ್ಲಿಸಿದ್ದ ದೂರುಗಳನ್ನು ಆಪಾದಿತ ಶ್ರೀ ಆದಿಕುಮಾರ್, ರವನ್ನು ಸರ್ಕಾರದ ಸೇವೆಯಿಂದ ಅಮಾನತ್ತುಗೊಳಿಸಿ ಹೊರಡಿಸಲಾಗಿದ್ದ ಆದೇಶದ ದಿನಾಂಕ 17.7.2008ರಲ್ಲಿ ಯಥಾವತ್ತಾಗಿ ಪುನರುಚ್ಚರಿಸಲಾಗಿದ್ದರಿಂದ, ಆತನಿಗೆ ಪ್ರತ್ಯೇಕವಾಗಿ ದಾಖಲಾತಿಗಳನ್ನು ಒದಗಿಸುವ ಪ್ರಶ್ನೆ ಉದ್ಭವಿಸಲಿಲ್ಲವಾದ್ದರಿಂದ, ಅವರ ಕೋರಿಕೆಯನ್ನು ಪರಿಶೀಲಿಸಲು ಸೂಕ್ತವಲ್ಲವೆಂದು ಹಾಗೂ, ಆಪಾದಿತ ಸರ್ಕಾರಿ ನೌಕರನಿಗೆ ವಿಚಾರಣಾ ಸಂದರ್ಭದಲ್ಲಿ ದಾಖಲಾತಿಗಳನ್ನು ಪರಿಶೀಲಿಸಲು ನಿಯಮಗಳ ಅನ್ವಯ ಸಾಕಷ್ಟು ಅವಕಾಶ ಒದಗಿಸಿದ್ದರಿಂದ, ಅವರ ಕೋರಿಕೆಯನ್ನು ಪರಿಶೀಲಿಸಲು ಸೂಕ್ತವಲ್ಲವೆಂದು ಅವರಿಗೆ ತಿಳಿಸಲಾಗಿತ್ತು.

ಒಟ್ಟಾರೆ, ಈ ಪ್ರಕರಣದಲ್ಲಿನ ಆರೋಪಿ ಶ್ರೀ ಆದಿಕುಮಾರ್, ಇವರು ಉಲ್ಲೇಖ(5)ರಲ್ಲಿನ ಕಾರಣ ಕೇಳುವ ಜ್ಞಾಪನದಲ್ಲಿನ ಅವರ ವಿರುದ್ಧದ ಆರೋಪಗಳಿಗೆ ಅವರ ವಿವರಣೆಯನ್ನು ಸಲ್ಲಿಸದೇ, ಕೇವಲ ಅನಗತ್ಯವಾಗಿ ಪತ್ರ ವ್ಯವಹಾರಗಳನ್ನು ಮುಂದುವರೆಸಿದ್ದಲ್ಲದೆ, ಆತನ ವಿರುದ್ಧ ಕ್ರಮ ಕೈಗೊಂಡಲ್ಲಿ ಅಥವಾ ದಂಡನೆ ವಿಧಿಸಿದ್ದಲ್ಲಿ ಆತನಿಗೆ ಹೊರಡಿಸಲಾದ **'ಕಾರಣ ಕೇಳುವ ಜ್ಞಾಪನಕ್ಕೆ' ವಿವರಣೆಯನ್ನು ಸಲ್ಲಿಸಲು ಆತನಿಗೆ ಅವಕಾಶ ನೀಡಲೇ ಇಲ್ಲವೆಂದು ವಾದಿಸಲು ಸಾಧ್ಯವಾಗುವ ರೀತಿಯಲ್ಲಿ,** ಆತನ ವಿರುದ್ಧದ ಈ ಇಲಾಖಾ ವಿಚಾರಣಾ ಪ್ರಕರಣವನ್ನು ಹಾಳು ಮಾಡಲು ಹಾಗು ಇಲಾಖಾ ವಿಚಾರಣಾ ಪ್ರಕರಣದ ದಾರಿಯನ್ನು ತಪ್ಪಿಸಲು ನಿರಂತರವಾಗಿ ಪ್ರಯತ್ನಿಸಿದ್ದ ಆಪಾದಿತ ಸರ್ಕಾರಿ ನೌಕರರಾದ ಶ್ರೀ ಆದಿಕುಮಾರ್, ಇವರ ವಿರುದ್ಧದ ಆರೋಪಗಳಿಗೆ ಸಂಬಂಧಿಸಿದಂತೆ, ಆತನು ಲಿಖಿತ ಹೇಳಿಕೆ/ ವಿವರಣೆ ಸಲ್ಲಿಸದೆ, ಪ್ರಸ್ತುತ ಆತನ ವಿರುದ್ಧದ ಇಲಾಖಾ ವಿಚಾರಣೆಯ ಪ್ರಾರಂಭದ ಹಂತದಿಂದಲೂ, ಸಂಪೂರ್ಣವಾಗಿ ನಕಾರಾತ್ಮಕ ಪ್ರತಿಕ್ರಿಯೆ (negative reaction) ನೀಡುತ್ತಲೆ ಮುಂದುವರೆದಿದ್ದರಿಂದ, ಆತನ ವಿರುದ್ಧ ಹೊರಡಿಸಲಾದ ಆರೋಪಗಳ ಸತ್ಯಾಸತ್ಯತೆಯನ್ನು ಕಂಡು ಕೊಳ್ಳಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು,

1957ರ ನಿಯಮ:11ರ ಅನ್ವಯ ಉಲ್ಲೇಖ(13)ರಲ್ಲಿನ ದಿನಾಂಕ 11.2.2009ರ ಆದೇಶದಲ್ಲಿ ಶ್ರೀ ಪದ್ಮನಾಭ ಕೇದಿಲಾಯ, ನಿವೃತ್ತ ಜಿಲ್ಲಾ ಹಾಗೂ ಸೆಷೆನ್ಸ ನ್ಯಾಯಾಧೀಶರು, ಇವರನ್ನು ವಿಚಾರಣಾಧಿಕಾರಿಗಳನ್ನಾಗಿ ನೇಮಕಾತಿ ಮಾಡಲಾಗಿತ್ತು.

ನಿವೃತ್ತ ಜಿಲ್ಲಾ ನ್ಯಾಯಾಧೀಶರು ಆದ ವಿಚಾರಣಾಧಿಕಾರಿಗಳು, ದಿನಾಂಕ 21.4.2010ರಂದು (ಉಲ್ಲೇಖ: 14) ಸಲ್ಲಿಸಿದ ಅವರ ವಿಚಾರಣಾ ವರದಿಯಲ್ಲಿ **"ಆಪಾದಿತರು (ಅಂದರೆ ಸರ್ಕಾರಿ ನೌಕರರಾದ ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರು) ದೋಷಾರೋಪಣೆಯಲ್ಲಿ ನಮೂದಿಸಿದಂತೆ, 1966ರ ಸರ್ಕಾರಿ ನೌಕರರ ನಡತೆ ನಿಯಮಾವಳಿ 3 ರಂತೆ ಗಂಭೀರ ತಪ್ಪು ಮಾಡಿರುವುದು ಸ್ಪಷ್ಟವಾಗಿ ಸಾಭೀತಾಗಿದೆ. ತನ್ನ ಕೆಲಸದಲ್ಲಿ ನಿರ್ಲಕ್ಷತೆ, ಇತರರಿಗೆ ಮೋಸ, ವಂಚನೆ, ಹಣದ ದುರುಪಯೋಗ, ಇತ್ಯಾದಿ ತಪ್ಪು ಮಾಡಿರುವುದು ಸ್ಪಷ್ಟವಾಗಿ ಕಂಡು ಬಂದಿದೆ. ಆದ್ದರಿಂದ 9ನೇ ಆರೋಪ ಹೊರತುಪಡಿಸಿ ಉಳಿದ ಆರೋಪಗಳು ಸಾಬೀತಾಗಿರುತ್ತದೆ"** ಎಂದು ಸ್ಪಷ್ಟವಾಗಿ ತಿಳಿಸಿರುತ್ತಾರೆ.

**ಈ ವಿಚಾರಣಾ ವರದಿಯನ್ನು ಈ ಆದೇಶದ ಒಂದು ಭಾಗವನ್ನಾಗಿಸಿ, ಗುರುತಿಸಲಾಗಿದೆ,**

ಸರ್ಕಾರದ ಸುತ್ತೋಲೆ ಸಂಖ್ಯೆ:ಸಿಆಸುಇ 6 ಎಸ್ ಡಿ ಇ 91, ದಿನಾಂಕ 21.3.1992ರ ಅನ್ವಯ, ಆಪಾದಿತ ಸರ್ಕಾರಿ ನೌಕರನಿಗೆ, ಈ ನಿರ್ದೇಶನಾಲಯದ ಉಲ್ಲೇಖ(15)ರಲ್ಲಿನ 2ನೇ ಕಾರಣ ಕೇಳುವ ಜ್ಞಾಪನದೊಂದಿಗೆ ಇಲಾಖಾ ವಿಚಾರಣಾ ವರದಿಯನ್ನು ಜಾರಿ ಮಾಡಿ, ಆತನ ಲಿಖಿತ ಹೇಳಿಕೆಯನ್ನು 15 ದಿನಗಳ ಒಳಗಾಗಿ ಸಲ್ಲಿಸುವಂತೆ ಆತನಿಗೆ ಸೂಚಿಸಲಾಗಿತ್ತು.

ಆದರೆ, ಆಪಾದಿತ ಸರ್ಕಾರಿ ನೌಕರನು, ಆತನಿಗೆ ಉಲ್ಲೇಖ(5)ರಲ್ಲಿನ ಕಾರಣ ಕೇಳುವ ಜ್ಞಾಪನ ನೀಡಿ ಆತನ ಲಿಖಿತ ವಿವರಣೆ ನೀಡುವಂತೆ ಸೂಚಿಸಲಾದ ಸಂದರ್ಭದಲ್ಲಿ ಅನುಸರಿಸಲಾಗಿದ್ದ ತಂತ್ರವನ್ನೇ (tactic) ಆತನು ದಿನಾಂಕ 10.5.2010ರಂದು ಸ್ವೀಕರಿಸಿದ 2ನೇ ಕಾರಣ ಕೇಳುವ ಜ್ಞಾಪನಕ್ಕೆ ಆತನ ವಿವರಣೆ ಸಲ್ಲಿಸದೇ ದಿನಾಂಕ 24.5.2010ರಂದು ಸಲ್ಲಿಸಿದ ಆತನ ಕೋರಿಕೆಯಲ್ಲಿ **"ಅದಕ್ಕೆ ಉತ್ತರ ನೀಡಲು ನನಗೆ ಕೆಲವೊಂದು ದಾಖಲಾತಿಗಳು ಬೇಕಾಗುತ್ತವೆ. ಅಂತೆಯೇ ನನ್ನ ಕಾನೂನು ಸಲಹೆಗಾರರು ತುರ್ತು ಕೆಲಸದ ನಿಮಿತ್ತ ಸದ್ಯದಲ್ಲಿ ನನಗೆ ಅಲಭ್ಯರಿರುತ್ತಾರೆ. ಅವರ ಸಲಹೆ ಪಡೆದು ನಾನು ಮೇಲಿನ ಉಲ್ಲೇಖದ ಜ್ಞಾಪನಕ್ಕೆ ಉತ್ತರ ನೀಡಬೇಕಾಗಿರುವುದರಿಂದ ನನಗೆ ನೀಡಲಾಗಿರುವ ಕಾಲಾವಕಾಶ ಮುಗಿದ ನಂತರ ಮತ್ತೆ 60 ದಿನಗಳ ಕಾಲಾವಕಾಶ ನೀಡಬೇಕೆಂದು ಕೋರುತ್ತೇನೆ, ಮತ್ತು ನನಗೆ ಬೇಕಾದ ದಾಖಲಾತಿಗಳ ಬಗ್ಗೆ ಪ್ರತ್ಯೇಕ ಮನವಿಯನ್ನು ಸಲ್ಲಿಸುತ್ತೇನೆಂದು"** ತಿಳಿಸಿರುತ್ತಾರೆ.

ಈ ಆಪಾದಿತ ನೌಕರರು, ಮತ್ತು ಉಲ್ಲೇಖ(16)ರಲ್ಲಿರುವ ದಿನಾಂಕ 24.5.2010ರಂದು ಸಲ್ಲಿಸಿದ ಮನವಿಯನ್ನು ಪರಿಶೀಲಿಸುವ ಹಂತದಲ್ಲಿ ದಿನಾಂಕ 2.6.2010 ರಂದು ಸಲ್ಲಿಸಿದ ಅವರ ಇನ್ನೊಂದು ಮನವಿಯಲ್ಲಿ ರಾಮನಗರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿಯ ಅಕ್ವಿಟೆನ್ಸ್ ಪ್ರತಿ, ನಗದು ಪುಸ್ತಕದ ಪ್ರತಿ ಹಾಗೂ ಇನ್ನಿತರ ದಾಖಲಾತಿಗಳನ್ನು ಒದಗಿಸುವಂತೆ ಕೋರಿದ್ದರು.

ಮೇಲಿನ ದಿನಾಂಕ 24.5.2010ರಂದು ಹಾಗೂ ದಿನಾಂಕ 2.6.2010ರಂದು ಸಲ್ಲಿಸಿದ ಅವರ ಮನವಿಗಳನ್ನು ಪರಿಶೀಲಿಸಿ, ಅವರ ಮನವಿಯ ದಿನಾಂಕ 24.5.2010ಕ್ಕೆ ಸಂಬಂಧಿಸಿದಂತೆ "ಅವರ ಕಾನೂನು ಸಲಹೆಗಾರರು ತುರ್ತು ಕೆಲಸದ ನಿಮಿತ್ತ ಅಲಭ್ಯರಿರುತ್ತಾರೆ" ಎಂದು ನಮೂದಿಸಿ 60 ದಿನಗಳ ಕಾಲಾವಕಾಶವನ್ನು ನೀಡಬೇಕೆಂಬುದನ್ನು ಪರಿಶೀಲಿಸಿ, "ಆಪಾದಿತ ಸರ್ಕಾರಿ ನೌಕರರ ಕಾನೂನು ಸಲಹೆಗಾರರು" ಲಭ್ಯವಿರದೇ ಇರುವುದು ಅಪಾದಿತರ ವೈಯಕ್ತಿಕ ಸಮಸ್ಯೆಯಾಗಿದ್ದರಿಂದ, ಅವರ ಲಿಖಿತ ಹೇಳಿಕೆ ಸಲ್ಲಿಸಲು ಹೆಚ್ಚಿನ ಕಾಲಾವಕಾಶ ನೀಡಲು ಅದೊಂದು ಸೂಕ್ತವಾದ ಕಾರಣವಲ್ಲವೆಂದು, ಹಾಗೂ ಉಲ್ಲೇಖ 16ರಲ್ಲಿರುವ ಅವರ ಮನವಿ ದಿನಾಂಕ 2.6.2010ಕ್ಕೆ ಸಂಬಂಧಿಸಿದಂತೆ ಅದರಲ್ಲಿನ ಅಂಶಗಳನ್ನು ಪರಿಶೀಲಿಸಿ, ಅವರು ಒದಗಿಸುವಂತೆ ನಮೂದಿಸಲಾದ ಅಕ್ವಿಟೆನ್ಸ್ ಹಾಗೂ ಅದಕ್ಕೆ ಸಂಬಂಧಿಸಿದ ನಗದು ಪುಸ್ತಕವನ್ನು ಇಲಾಖಾ ವಿಚಾರಣಾ ಸಂದರ್ಭದಲ್ಲಿ ಈ ಆಪಾದಿತ ಸರ್ಕಾರಿ ನೌಕರರ ಉಪಸ್ಥಿತಿಯಲ್ಲಿ ಪರಿಶೀಲಿಸಿ, ಇಲಾಖಾ ವಿಚಾರಣಾ ವರದಿಯಲ್ಲಿ ದಾಖಲಿಸಿ, ವಿವರಿಸಿದ್ದರಿಂದ, ಹಾಗೂ ಈ ವಾಸ್ತವಾಂಶವು ಆಪಾದಿತ ನೌಕರರಾದ ಶ್ರೀ ಆದಿಕುಮಾರ್, ಅವರಿಗೆ ಸಂಪೂರ್ಣವಾಗಿ ಮಾಹಿತಿ ಇದ್ದಾಗಲೂ, ಇಲಾಖಾ ವರದಿಗೆ ಸಂಬಂಧಿಸಿದಂತೆ ಅವರ ವಿರುದ್ಧ ಕ್ರಮ ಜರುಗಿಸುವುದನ್ನು ತಡೆಗಟ್ಟಲು ಅಥವಾ ಅಂಥಹ ಕ್ರಮ ಜರುಗಿಸುವುದನ್ನು ಮುಂದೂಡುವ ಉದ್ದೇಶದಿಂದ, ಮೇಲಿನ ದಿನಾಂಕ 2.6.2010ರ ಮನವಿಯಲ್ಲಿ ಅದೇ ದಾಖಲಾತಿಗಳನ್ನು ಒದಗಿಸುವಂತೆ ಕೋರಿದ್ದು, ಸ್ಪಷ್ಟವಾಗಿ ಕಂಡು ಬರುತ್ತದೆಯಾದ್ದರಿಂದ, ಉಲ್ಲೇಖ (17) ರಲ್ಲಿ ತಿಳಿಸಲಾದ ಹಿಂಬರಹದ ದಿನಾಂಕ 15.6.2010ರಲ್ಲಿ ಅವರ ಕೋರಿಕೆಯನ್ನು ತಿರಸ್ಕರಿಸಲಾಗಿತ್ತು. ಆದಾಗ್ಯೂ, ಅದೇ ಹಿಂಬರಹ ಕೊನೆಯ ಕಂಡಿಕೆಯಲ್ಲಿ "ಸರ್ಕಾರದ ಸುತ್ತೋಲೆ ಸಂಖ್ಯೆ:ಸಿಆಸುಇ 12 ಸೇಇವಿ 94, ದಿನಾಂಕ 7.12.1994ರಲ್ಲಿ ಆಪಾದಿತ ಸರ್ಕಾರಿ ನೌಕರರಿಗೆ ಇಲಾಖಾ ವಿಚಾರಣೆ ನಂತರ ದಂಡನೆಯನ್ನು ವಿಧಿಸುವ ಕುರಿತು ನೀಡಲಾದ ಸೂಚನೆಯಲ್ಲಿ "ಆಪಾದಿತ ಸರ್ಕಾರಿ ನೌಕರನಿಗೆ ಇಲಾಖಾ ವಿಚಾರಣಾ ವರದಿಯನ್ನು ಕಳುಹಿಸಿ, ಅವರಿಗೆ ಸೂಕ್ತ ಕಾಲಾವಕಾಶವನ್ನು ನೀಡಿ, ಅವರ ಹೇಳಿಕೆಯನ್ನು ಪಡೆದು, ತದನಂತರ ಸೂಕ್ತ ದಂಡನೆಯನ್ನು ವಿಧಿಸಬಹುದು" ಎಂದು ಸೂಚಿಸಿದ್ದನ್ನು ವಿವರಿಸಿದ್ದಾಗ್ಯೂ, ಅದೇ ಕಂಡಿಕೆಯಲ್ಲಿ, ಈ ಹಿಂಬರಹ ತಲುಪಿದ 15 ದಿನಗಳ ಒಳಗಾಗಿ ಅವರ ಲಿಖಿತ ಹೇಳಿಕೆಯನ್ನು ಸಲ್ಲಿಸುವಂತೆ ಸೂಚಿಸಲಾಗಿತ್ತು.

ಆದರೆ, ಈ ಆಪಾದಿತ ಸರ್ಕಾರಿ ನೌಕರರಿಗೆ, ದಿನಾಂಕ 27.4.2010ರಂದು ಹೊರಡಿಸಲಾದ 2ನೇ ಕಾರಣ ಕೇಳುವ ಜ್ಞಾಪನವನ್ನು ದಿನಾಂಕ 10.5.2010ರಂದು ಸ್ವೀಕರಿಸಿದ್ದು, ಹಾಗೂ ಅವರಿಗೆ ನೀಡಲಾದ ಹಿಂಬರಹದ ದಿನಾಂಕ 15.6.2010ನ್ನು ದಿನಾಂಕ 22.6.2010ರಂದು ಸ್ವೀಕರಿಸಿದ್ದು, ಅವರಿಗೆ ಅವರ ಲಿಖಿತ ಹೇಳಿಕೆಯನ್ನು ಸಲ್ಲಿಸಲು ನೈಸರ್ಗಿಕ ನ್ಯಾಯದ ತತ್ವದ ಅನ್ವಯ (Principles of natural justice) ಗರಿಷ್ಠ (maximum) ಒಂದೂವರೆ ತಿಂಗಳಷ್ಟು ಕಾಲಾವಕಾಶವಿತ್ತಾದರೂ, ಈ ಅವಧಿಯ ಒಳಗಾಗಿ ಅವರ ಲಿಖಿತ ಹೇಳಿಕೆಯನ್ನು ಸಲ್ಲಿಸದೆ, ಉಲ್ಲೇಖ 18ರಲ್ಲಿರುವ ಅವರ ಮತ್ತೊಂದು ಮನವಿ ದಿನಾಂಕ 6.7.2010ರಲ್ಲಿ ಗೌರವಾನ್ವಿತ ಸರ್ವೋಚ್ಚ ನ್ಯಾಯಾಲಯದ ಒಂದು ತೀರ್ಪನ್ನು ವಿವರಿಸಿ, ಅವರಿಗೆ ಬೇಕಾದ ದಾಖಲಾತಿಗಳನ್ನು ಒದಗಿಸುವಂತೆ ಮಾಹಿತಿ ಹಕ್ಕು ಅಧಿನಿಯಮಗಳ ಅಡಿಯಲ್ಲಿ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರಿಗೆ ಮನವಿ ಪತ್ರ ಸಲ್ಲಿಸಿದ್ದು, ಅವರಿಗೆ ಅವುಗಳು ದೊರಕಿದ ತಕ್ಷಣ 2ನೇ ಕಾರಣ ಕೇಳುವ ಜ್ಞಾಪನಕ್ಕೆ ಉತ್ತರಿಸಲು ಸಾದ್ಯವಾಗುವುದರಿಂದ, ಸೂಕ್ತ ಕಾಲಾವಕಾಶ ನೀಡಬೇಕೆಂದು ಪರಿಶೀಲಿಸಲಾಗಿ, ಅವರ ಮನವಿ ದಿನಾಂಕ 2.6.2010ರಲ್ಲಿ "ರಾಮನಗರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿಯಲ್ಲಿ ತಿದ್ದುಪಡಿಯಾದ ಅಕ್ವಿಟೆನ್ಸ್ ಪ್ರತಿ ಹಾಗೂ ನಗದು ಪುಸ್ತಕ ಒದಗಿಸುವಂತೆ ಕೋರಿದ್ದನ್ನು ಪರಿಶೀಲಿಸಲಾಗಿ, ಅವರು ಮಾಹಿತಿ ಹಕ್ಕು

ಅಧಿನಿಯಮಗಳ ಅಡಿಯಲ್ಲಿ ಸಲ್ಲಿಸಲಾಗಿದೆ ಎನ್ನಲಾದ ಅವರ ಅರ್ಜಿಗೂ, ಹಾಗೂ ಅವರು ದಿನಾಂಕ 2.6.2010ರಂದು ಸಲ್ಲಿಸಿದ ಅರ್ಜಿಯಲ್ಲಿನ ದಾಖಲಾತಿಗಳು ಒಂದಕ್ಕೊಂದು ಸಂಬಂಧವಿಲ್ಲದ ದಾಖಲಾತಿಗಳಾಗಿದ್ದರಿಂದ, ಹಾಗೂ ಅವರು ಅವರ ದಿನಾಂಕ 6.7.2010ರ ಮನವಿಯಲ್ಲಿ ತಿಳಿಸಲಾದ ಗೌರವಾನ್ವಿತ ಸರ್ವೋಚ್ಚ ನ್ಯಾಯಾಲಯದ ತೀರ್ಪಿನ ಪ್ರತಿಯನ್ನು ಹಾಗೂ ಅವರು ಬೆಂಗಳೂರು (ಗ್ರಾಮಾಂತರ) ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳಿಗೆ ಮಾಹಿತಿ ಹಕ್ಕು ಅಧಿನಿಯಮಗಳ ಅಡಿಯಲ್ಲಿ ಸಲ್ಲಿಸಲಾಗಿದೆ ಎನ್ನಲಾದ ಅರ್ಜಿಗಳ ಪ್ರತಿಯನ್ನು ಲಗತ್ತಿಸಿಲ್ಲವಾದ್ದರಿಂದ, ಹಾಗೂ, ಮಾಹಿತಿ ಹಕ್ಕು ಅಧಿನಿಯಮಗಳ ಅಡಿಯಲ್ಲಿ ಸಲ್ಲಿಸಲಾಗಿದೆ ಎನ್ನಲಾದ ಅರ್ಜಿಗೆ ಹಾಗೂ, ಅವರ ವಿರುದ್ಧದ ಇಲಾಖಾ ವಿಚಾರಣಾ ವರದಿಗೆ ಅವರ ಲಿಖಿತ ಹೇಳಿಕೆಯನ್ನು ಸಲ್ಲಿಸುವುದಕ್ಕೆ, ಒಂದಕ್ಕೊಂದು ಸಂಬಂಧಪಟ್ಟಿಲ್ಲವಾದ್ದರಿಂದ, ಉಲ್ಲೇಖ(17) ರಲ್ಲಿ ತಿಳಿಸಲಾದ ಅವರಿಗೆ ನೀಡಲಾದ ಮತ್ತೊಂದು ಹಿಂಬರಹದ ದಿನಾಂಕ 27.7.2010 ರಲ್ಲಿ ಅವರ ಕೋರಿಕೆ ದಿನಾಂಕ 6.7.2010ನ್ನು ತಿರಸ್ಕರಿಸಲಾಗಿದೆ.

ಒಟ್ಟಾರೆ ಆರೋಪಿತ ಸರ್ಕಾರಿ ನೌಕರರಾದ ಶ್ರೀ ಆದಿಕುಮಾರ್, ಇವರಿಗೆ ಹೊರಡಿಸಲಾದ 2ನೇ ಕಾರಣ ಕೇಳುವ ಜ್ಞಾಪನ ದಿನಾಂಕ 27.4.2010ರ ನಂತರ ದಿನಾಂಕ 6.7.2010ರ ವರೆಗೆ, ಆಪಾದಿತ ಸರ್ಕಾರಿ ನೌಕರರು, ಅವರ 3ನೇ ಅರ್ಜಿಯನ್ನು ಸಲ್ಲಿಸುವ ವರೆಗಿನ ಪತ್ರ ವ್ಯವಹಾರಗಳನ್ನು ಪರಿಶೀಲಿಸಲಾಗಿ, ಅಪಾದಿತ ಸರ್ಕಾರಿ ನೌಕರರು, ಅವರ 2ನೇ ಕಾರಣ ಕೇಳುವ ಜ್ಞಾಪನಕ್ಕೆ ಲಿಖಿತ ಹೇಳಿಕೆ ಸಲ್ಲಿಸುವುದನ್ನು ಉದ್ದೇಶಪೂರ್ವಕವಾಗಿ ತಪ್ಪಿಸಿಕೊಳ್ಳುವ (avoid) ಪ್ರಯತ್ನವನ್ನು ಮಾಡುತ್ತಿರುವುದಾಗಿ, ಹಾಗೂ ಅವರಿಗೆ ಜಾರಿ ಮಾಡಲಾದ ವಿಚಾರಣಾ ವರದಿಯನ್ವಯ **ಅವರ ವಿರುದ್ಧದ 12 ಆರೋಪಗಳಲ್ಲಿ 11 ಆರೋಪಗಳು ಸಾಬೀತಾಗಿದ್ದರಿಂದ,** ಅವರಿಗೆ ದಂಡನೆ ವಿಧಿಸಿದಲ್ಲಿ, ಅವರಿಗೆ 2ನೇ ಕಾರಣ ಕೇಳುವ ಜ್ಞಾಪನಕ್ಕೆ ವಿವರಣೆ ಸಲ್ಲಿಸಲು ಕಾಲಾವಕಾಶ ನೀಡಿಲ್ಲವೆಂದು (ಸಾಕಷ್ಟು ಕಾಲಾವಕಾಶ ನೀಡಿದ್ದಾಗ್ಯೂ) ವಾದಿಸುವ ದುರುದ್ದೇಶದಿಂದ, ಅವರ ಲಿಖಿತ ಹೇಳಿಕೆಯನ್ನು ಸಲ್ಲಿಸಿಲ್ಲವೆಂದು ಸ್ಪಷ್ಟವಾಗಿ ಕಂಡು ಬರುತ್ತದೆ.

ಒಟ್ಟಾರೆ, ಆಪಾದಿತ ಸರ್ಕಾರಿ ನೌಕರರು, ಅವರ ಮೇಲಿನ 12 ಆರೋಪಗಳಿಗೆ ಸಂಬಂಧಿಸಿದಂತೆ, ಅವರಿಗೆ ದಿನಾಂಕ 17.9.2008ರಂದು ಹೊರಡಿಸಲಾದ **"ಕಾರಣ ಕೇಳುವ ಜ್ಞಾಪನಕ್ಕೆ"** ಮತ್ತು ಅವರ ವಿರುದ್ಧದ ಇಲಾಖಾ ವಿಚಾರಣೆ ನಂತರ, ವಿಚಾರಣಾ ವರದಿಯೊಂದಿಗೆ, ಅವರಿಗೆ ದಿನಾಂಕ 27.4.2010ರಂದು ಹೊರಡಿಸಲಾದ **"2ನೇ ಕಾರಣ ಕೇಳುವ ಜ್ಞಾಪನಕ್ಕೆ"** ಅವರ ವಿವರಣೆಯನ್ನು ಸಲ್ಲಿಸದೇ, ಅವರ ವಿರುದ್ಧದ ಆರೋಪಗಳನ್ನು ಸ್ವತಃ ಒಪ್ಪಿಕೊಂಡಿದ್ದರಿಂದ, ಹಾಗೂ ಅವರ ವಿರುದ್ಧದ ಇಲಾಖಾ ವಿಚಾರಣಾ ವರದಿಯನ್ನು ಒಪ್ಪಿಕೊಂಡಿದ್ದರಿಂದ, ಅವರ ವಿರುದ್ಧದ ಒಟ್ಟು 12 ಆರೋಪಗಳಲ್ಲಿ 11 ಆರೋಪಗಳು, ನ್ಯಾಯಬದ್ಧವಾಗಿ ರುಜುವಾತಾಗಿದ್ದರಿಂದ, ಇಲಾಖಾ ವಿಚಾರಣೆಯ ವರದಿಯನ್ನು ಸಂಪೂರ್ಣವಾಗಿ ಒಪ್ಪಿಕೊಂಡು **"ಮಾಡಿರುವ ತಪ್ಪಿಗೆ ಸಮನಾದ ಶಿಕ್ಷೆ"** ಎಂಬಂತೆ, ಆಪಾದಿತ ಸರ್ಕಾರಿ ನೌಕರನಿಗೆ ಸೂಕ್ತವಾದ ದಂಡನೆಯನ್ನು ವಿಧಿಸತಕ್ಕದ್ದಾಗಿದೆ. ಹಾಗೂ ಈ ಆಪಾದಿತ ನೌಕರರಾದ ಶ್ರೀ ಆದಿಕುಮಾರ್, ಇವರ ವಿರುದ್ಧದ ಕೆಲವು ಆರೋಪಗಳಿಗೆ ಸಂಬಂಧಿಸಿದಂತೆ, ಈ ಕೆಳಗೆ ತಿಳಿಸಲಾದ ಅಂಶಗಳನ್ನು ವಿವರಿಸುವುದರೊಂದಿಗೆ ಈ ಆಪಾದಿತ ಸರ್ಕಾರಿ ನೌಕರರ ಇತ್ತೀಚಿನ ಸಂಕ್ಷಿಪ್ತ ಸೇವಾ ಚರಿತ್ರೆಯನ್ನು (ಈ ಇಲಾಖಾ ವಿಚಾರಣೆಗೆ ಸಂಬಂಧಪಟ್ಟಿಲ್ಲವಾದರೂ) ಈ ಕೆಳಗೆ ತಿಳಿಸಲಾಗಿದೆ:–

ಎ) ಆಪಾದಿತ ಸರ್ಕಾರಿ ನೌಕರರಾದ ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರು ಇವರ ಅನಧಿಕೃತ ಗೈರು ಹಾಜರಾತಿ, ದುರ್ನಡತೆ, ಕರ್ತವ್ಯಲೋಪ, ಸರ್ಕಾರದ ಹಣದ ದುರುಪಯೋಗ, ಇತ್ಯಾದಿ ಆರೋಪಗಳಿಗೆ ಸಂಬಂಧಿಸಿದಂತೆ, ಈ ನಿರ್ದೇಶನಾಲಯದ ಆದೇಶದ ಸಂಖ್ಯೆ:ಆಡಳಿತ/216/2008–09, ದಿನಾಂಕ 17.7.2008ರಲ್ಲಿ ಅವರನ್ನು ಅಮಾನತ್ತುಗೊಳಿಸಲಾದ ಈ ಅದೇಶವನ್ನು ಅವರೇ ತಿಳಿಸಲಾದ ಅವರ ಮನೆ ವಿಳಾಸಕ್ಕೆ (ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರು, ಸಂಖ್ಯೆ:23/24, ಟೀಚರ್ಸ್ ಕಾಲನಿ, ವಿ.ವಿ. ಬಡಾವಣೆ, ಬಂ.ಶ್ರೀ ಸರ್ಕಲ್ ಹತ್ತಿರ ಹೊಸಕೋಟೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ) ಕಳುಹಿಸಲಾಗಿದ್ದನ್ನು **"ಸ್ವೀಕರಿಸಲು ನಿರಾಕರಿಸಿರುವ"** ಕುರಿತು ["refuse to receive"] ಎಂದು ಅಂಚೆ ಇಲಾಖೆಯ ಷರಾಗಳನ್ನೊಳಗೊಂಡ ಕವರನ್ನು ಪರಿಶೀಲಿಸಲಾಗಿ ಆಪಾದಿತ ಸರ್ಕಾರಿ ನೌಕರರು ಉದ್ದೇಶಪೂರ್ವಕವಾಗಿ ತಿರಸ್ಕರಿಸಿರುವುದು ಕಂಡು ಬರುತ್ತದೆ.

ಬಿ) ಅದೇ ರೀತಿ, ಆಪಾದಿತ ಸರ್ಕಾರಿ ನೌಕರರಿಗೆ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಗಳು:1957ರ ನಿಯಮ:11ರ ಅಡಿಯಲ್ಲಿ ದಿನಾಂಕ 11.9.2009ರಂದು ಹೊರಡಿಸಲಾದ **"ಕಾರಣ ಕೇಳುವ ಜ್ಞಾಪನವನ್ನು"** ಅವರ ಅದೇ ಮನೆ ವಿಳಾಸಕ್ಕೆ ಕಳುಹಿಸಲಾಗಿತ್ತಾದರೂ, "not found daily" ಎಂದು ಅಂಚೆ ಇಲಾಖೆಯು ಹಿಂತಿರುಗಿಸಿರುತ್ತಾರೆ.

ಅಂತಿಮವಾಗಿ, ಈ ಜ್ಞಾಪನವನ್ನು ಅವರಿಗೆ ದಿನಾಂಕ 13.10.2008ರಂದು ಜಾರಿ ಮಾಡಲಾಗಿತ್ತು.

ಸಿ) ಈ ನಿರ್ದೇಶನಾಲಯದ ಆದೇಶದ ಸಂಖ್ಯೆ:ಆಡಳಿತ/112/2008–09, ದಿನಾಂಕ 4.11.2008ರಲ್ಲಿ ಅವರನ್ನು ಸೇವೆಗೆ ಪುನರ್ ಸ್ಥಾಪಿಸಿ, ಆದೇಶ ಹೊರಡಿಸಿದ ನಂತರ ಆ ಆದೇಶದ ಪ್ರತಿಯನ್ನು, ಸ್ವತಃ ಅವರೇ ನೀಡಲಾದ ವಿಳಾಸಕ್ಕೆ ಕಳುಹಿಸಲಾಗಿದ್ದರೂ, ಈ ಆದೇಶವನ್ನು ಒಳಗೊಂಡಿದ್ದ ಆ ಅಂಚೆ ಕವರು "person not found during delivery time" ಎಂಬ ಷರಾದೊಂದಿಗೆ ಹಿಂತಿರುಗಿ ಬಂದಿರುತ್ತದೆ.

ಈ ಬಗ್ಗೆ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ರಾಮನಗರ ಮತ್ತು ಕೋಲಾರ ಇವರಿಗೆ ದಿನಾಂಕ 10.12.2008 ರಂದು ಪತ್ರ ಬರೆಯಲಾಗಿತ್ತು.

ಡಿ) ಅದೇ ವಿಷಯಕ್ಕೆ ಸಂಬಂಧಿಸಿದಂತೆ, ಆಪಾದಿತ ಸರ್ಕಾರಿ ನೌಕರರು ಅಮಾನತ್ತಿನ ಅವಧಿಯಲ್ಲಿ ಅವರ ಮನೆ ವಿಳಾಸ ನಮೂದಿಸದೇ ಸರ್ಕಾರಕ್ಕೆ ದಿನಾಂಕ 25.8.2008ರಂದು ಹಾಗೂ ದಿನಾಂಕ 18.10.2007ರಂದು, ದಿನಾಂಕ 27.10.2007ರಂದು, ಸಲ್ಲಿಸಿದ ಅವರ ಮನವಿಗಳಲ್ಲಿ ಅವರ ಮನೆ ವಿಳಾಸವನ್ನು ನಮೂದಿಸದೇ ಸಲ್ಲಿಸಿದ್ದನ್ನು ತೀವ್ರವಾಗಿ ಪರಿಗಣಿಸಿ ಇದೊಂದು ಅವರ **"ದುರ್ವರ್ತನೆ"** ಎಂದು ಅದೇ ಆಪಾದಿತ ಸರ್ಕಾರಿ ನೌಕರರಿಗೆ ದಿನಾಂಕ 7.11.2008 ರಂದು ಹೊರಡಿಸಲಾದ ಜ್ಞಾಪನದಲ್ಲಿ ಅವರಿಗೆ ತಿಳಿಸಲಾಗಿತ್ತು.

ಇ) ಒಟ್ಟಾರೆ, ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರು ಅವರನ್ನು ಅಮಾನತ್ತುಗೊಳಿಸಲಾದ ಆದೇಶವನ್ನು ಹಾಗೂ ಅವರನ್ನು ಸೇವೆಗೆ ಪುನರ್ ಸ್ಥಾಪಿಸಿದ ಆದೇಶವನ್ನು ಪಡೆದುಕೊಳ್ಳಲು ಉದ್ದೇಶಪೂರ್ವಕವಾಗಿ ತಪ್ಪಿಸಿಕೊಳ್ಳಲು (avoid) ಅದೇ ರೀತಿ, ಅವರಿಗೆ ಉಲ್ಲೇಖ (5)

ರಲ್ಲಿನ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಗಳು, 1957ರ ನಿಯಮ: 11ರ ಅಡಿಯಲ್ಲಿ ಹೊರಡಿಸಲಾದ ಅವರ ವಿರುದ್ಧದ ಆರೋಪಗಳನ್ನು ಕಾರಣ ಕೇಳುವ ಜ್ಞಾಪನವನ್ನು ಸ್ವೀಕರಿಸಲು ಹಾಗೂ ಅದೇ ರೀತಿ ಕಾರಣ ಕೇಳುವ ಜ್ಞಾಪನಕ್ಕೆ ಅವರಿಗೆ ಸಾಕಷ್ಟು ಸಮಯಾವಕಾಶ (maximum) ನೀಡಿದ್ದರೂ, ಲಿಖಿತ ವಿವರಣೆ ಸಲ್ಲಿಸಲು ಹಾಗೂ ಅವರ ವಿರುದ್ಧದ ಇಲಾಖಾ ವಿಚಾರಣೆ ನಂತರ, ಅವರಿಗೆ ಇಲಾಖಾ ವಿಚಾರಣಾ ವರದಿಯನ್ನು ಒದಗಿಸಿ, ಅವರ ಲಿಖಿತ ಹೇಳಿಕೆಯನ್ನು ಸಲ್ಲಿಸುವಂತೆ ಸಾಕಷ್ಟು ಕಾಲಾವಕಾಶ ನೀಡಲಾಗಿದ್ದರೂ ((maximum) ಅವರ ಲಿಖಿತ ಹೇಳಿಕೆಯನ್ನು ಸಲ್ಲಿಸದೇ, ಅನವಶ್ಯಕವಾದ ಮನವಿಯನ್ನು ಸಲ್ಲಿಸುವುದರಲ್ಲಿ ಸಮಯವನ್ನು ವ್ಯರ್ಥಪಡಿಸಿ, ಒಟ್ಟಾರೆ ಅವರ ಲಿಖಿತ ಹೇಳಿಕೆ ಸಲ್ಲಿಸುವುದನ್ನು ನಿರಂತರವಾಗಿ ತಪ್ಪಿಸಿಕೊಳ್ಳುವ (avoid) ಪ್ರಯತ್ನವನ್ನು ಇವರು ಮಾಡಿರುವುದು ಸ್ಪಷ್ಟವಾಗಿ ಕಂಡು ಬರುತ್ತದೆ ಹಾಗೂ ಇಂತಹ ಅವರ ನಡತೆಯು ಆತನ ಮೇಲೆ ಹೊರಿಸಲಾದ ಎಲ್ಲಾ ಆರೋಪಗಳನ್ನು ಒಪ್ಪಿಕೊಂಡಂತಾಗುತ್ತದೆ ಎಂದು ಸ್ಪಷ್ಟವಾಗಿ ಸಾಬೀತಾಗುತ್ತದೆ. ಅಲ್ಲದೆ, ಇಂತಹ ಅವರ ನಡತೆಯು, ಅವರಿಗೆ ದಂಡನೆ ವಿಧಿಸಿದಲ್ಲಿ, ಅವರಿಗೆ ಕಾಲಾವಕಾಶ ನೀಡಿಲ್ಲವೆಂದು ವಾದಿಸಬಹುದಾದ ದುರುದ್ದೇಶದಿಂದಲೂ ಎಂದು ಸ್ಪಷ್ಟವಾಗಿ ಕಂಡು ಬರುತ್ತದೆ.

(ಎಫ್) ಆಪಾದಿತ ಸರ್ಕಾರಿ ನೌಕರರಾದ ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರು ಇವರ ವಿರುದ್ಧದ ಇಲಾಖಾ ವಿಚಾರಣೆಗೆ ಸಂಬಂಧಿಸಿದಂತೆ, ಸಂಕ್ಷಿಪ್ತವಾಗಿ ವಿವರಿಸುವುದಾದಲ್ಲಿ ಅವರ ವಿರುದ್ಧ ಹೊರಿಸಲಾದ ಒಟ್ಟು 12–ಆರೋಪಗಳಲ್ಲಿ, 11 ಆರೋಪಗಳು ಸಾಬೀತಾಗಿರುವುದಾಗಿ ವಿಚಾರಣಾಧಿಕಾರಿಗಳು ಸಲ್ಲಿಸಿದ ವರದಿಯಲ್ಲಿ ತಿಳಿಸಿರುತ್ತಾರೆ.

ಆಪಾದಿತ ಸರ್ಕಾರಿ ನೌಕರರಾದ ಶ್ರೀ ಆದಿಕುಮಾರ್, ಇವರು ಬೆಂಗಳೂರು (ಗ್ರಾಮಾಂತರ) ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಕಚೇರಿ ಮುಖ್ಯಸ್ಥರು ದಿನಾಂಕ 21.5.2007ರಂದು ಸಲ್ಲಿಸಿದ ವರದಿಯೊಂದರಲ್ಲಿ ಆಪಾದಿತರ ಅನಧಿಕೃತ ಗೈರು ಹಾಜರಾತಿ, ಕರ್ತವ್ಯಲೋಪ ವಿವರಿಸಿ, ಪರ್ಯಾಯ ವ್ಯವಸ್ಥೆ ಮಾಡುವಂತೆ ತಿಳಿಸಲಾದ ಅಲ್ಪಾವಧಿಯಲ್ಲಿಯೇ ದಿನಾಂಕ 13.7.2007ರ ಅವರ ಇನ್ನೊಂದು ಪತ್ರದಲ್ಲಿ (ಇದು ಆಪಾದಿತ ಸರ್ಕಾರಿ ನೌಕರರ ಸ್ವಂತ ಕೈಬರಹದಿಂದ ಬರೆಯಲಾದ ಪತ್ರ) ಶ್ರೀ ಆದಿಕುಮಾರ್ (ಆಪಾದಿತ ಸರ್ಕಾರಿ ನೌಕರ) ಪ್ರಥಮ ದರ್ಜೆ ಸಹಾಯಕರು ಈ ಕಚೇರಿಯಲ್ಲಿ ಉತ್ತಮವಾಗಿ ಕಾರ್ಯನಿರ್ವಹಿಸುತ್ತಿರುವುದರಿಂದ ಅವರನ್ನು ವರ್ಗಾವಣೆ ಮಾಡಬಾರದಾಗಿ ವಿನಂತಿಸಿಕೊಳ್ಳುತ್ತೇನೆ" ಎಂದು ಸಲ್ಲಿಸಿದ ವರದಿಯನ್ನು ಪರಿಶೀಲಿಸಿ, ಈ ನಿರ್ದೇಶನಾಲಯದ ಪತ್ರದ ದಿನಾಂಕ 31.7.2007ರಲ್ಲಿ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ಬೆಂಗಳೂರು (ಗ್ರಾಮಾಂತರ) ಇವರು ಮೇಲೆ ತಿಳಿಸಲಾದ ಎರಡೂ ಪತ್ರಗಳಲ್ಲಿನ ದ್ವಂದ್ವ ಹೇಳಿಕೆ ಕುರಿತು (dual statement) ವಿವರಣೆ ನೀಡುವಂತೆ ಸೂಚಿಸಲಾಗಿತ್ತು.

ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರ ದಿನಾಂಕ 8.8.2008ರಂದು ಸಲ್ಲಿಸಿದ ವಿವರಣೆಯಲ್ಲಿ ಇನ್ನಿತರ ವಿಷಯಗಳೊಂದಿಗೆ "ಶ್ರೀ ಆದಿಕುಮಾರ್ ಪ್ರಥಮ ದರ್ಜೆ ಸಹಾಯಕರು ದಿನಾಂಕ 13.7.2007ರಂದು ದೂರವಾಣಿ ಮುಖಾಂತರ ನನಗೆ ಕರೆ ಮಾಡಿ, ಅವರ ವೈಯಕ್ತಿಕ ವಿಚಾರದ ಬಗ್ಗೆ ಒಂದು ಮನವಿಯನ್ನು ನಿರ್ದೇಶಕರು, ಆರ್ಥಿಕ ಮತ್ತು ಸಾಂಖ್ಯಿಕ ಇಲಾಖೆ ಇವರಿಗೆ ಇಂದೇ ತುರ್ತಾಗಿ ಸಲ್ಲಿಸಬೇಕಾಗಿದ್ದು, ಅದಕ್ಕೆ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳಾದ ನನ್ನ ಸಹಿ ಅಗತ್ಯವೆಂದು ತಿಳಿಸಿದರು. ಆದ್ದರಿಂದ ಬೆಳಿಗ್ಗೆ 9.30 ಗಂಟೆಗೆ ಕಚೇರಿಗೆ ಬರಲು ಅವರಿಗೆ ಸೂಚಿಸಿ, ನಾನು ಕೂಡ ಕಚೇರಿಗೆ ಹಾಜರಾದೆನು. 15 ನಿಮಿಷಗಳ ವರೆಗೆ ಇವರು (ಅಂದರೆ ಆಪಾದಿತ ಸರ್ಕಾರಿ ನೌಕರರು) ಕಚೇರಿಗೆ ಬರದ ಕಾರಣ 9.45 ಗಂಟೆಗೆ ಕಚೇರಿಯಿಂದ ಹೊರಡಲು ನಾನು ಸಿದ್ದವಾದೆನು. ಇದೇ ಸಮಯದಲ್ಲಿ ಇವರು (ಅಂದರೆ ಆಪಾದಿತ ಸರ್ಕಾರಿ ನೌಕರರು) ಕಚೇರಿಗೆ ಬಂದು, ಒಂದು ನಿವೇದನೆಯನ್ನು ತೋರಿಸಿ, ಈ ಮನವಿ ಪತ್ರವನ್ನು ನಿರ್ದೇಶಕರಿಗೆ ಈ ದಿನವೇ ತುರ್ತಾಗಿ ಕಳುಹಿಸಬೇಕಾಗಿದೆ. ನೀವು ಪ್ರವಾಸದಿಂದ ಹಿಂತಿರುಗುವುದು ವಿಳಂಬವಾಗುವುದೆಂದು ತಿಳಿಸಿ ಆತುರ–ಆತುರವಾಗಿ ನಿವೇದನೆಗೆ ಸಹಿ ಮಾಡುವಂತೆ ಕೋರಿಕೊಂಡಲು. ನಾನು ಪ್ರವಾಸಕ್ಕೆ ಹೋಗಬೇಕಾದ ಆತುರದಲ್ಲಿ ನಂಬುಗೆಯ ಮೇಲೆ ಸಹಿ ಮಾಡಿರುತ್ತೇನೆಂದು ವಿವರಿಸಿ, ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರನ್ನು ಬದಲಾಯಿಸಬೇಕೆಂದು" ಅವರು ವಿವರಿಸಿದ್ದನ್ನು ಪರಿಶೀಲಿಸಲಾಗಿ, ಈ ಆರೋಪಿತ ಸರ್ಕಾರಿ ನೌಕರರು ನಂಬಿಕೆಗೆ ಅನರ್ಹರಾಗಿದ್ದು, ಅದೇ ಹುದ್ದೆಯಲ್ಲಿ ಮುಂದುವರೆದಲ್ಲಿ ಅಪಾಯಕಾರಿ ಬೆಳವಣಿಗೆ ಎಂದು ಪರಿಗಣಿಸತಕ್ಕದ್ದಾಗಿದೆ, ಹಾಗೂ ಇಂತಹ "ನಂಬಿಕೆ ದ್ರೋಹ" ಎಸಗಿದ ಸರ್ಕಾರಿ ನೌಕರನೊಬ್ಬನಿಗೆ ಬೆಂಬಲಿಸಿದಂತಾಗುತ್ತದೆ.

(ಜಿ) ಅವರ ವಿರುದ್ಧದ ಮೊದಲನೆಯ ಆರೋಪವು ಈ ಆರೋಪಿತ ಸರ್ಕಾರಿ ನೌಕರರ ವರ್ಗಾವಣೆಗೆ ಸಂಬಂಧಿಸಿದಂತೆ ಕಚೇರಿ ಮುಖ್ಯಸ್ಥರಿಗೆ/ ಇಲಾಖಾ ಮುಖ್ಯಸ್ಥರಿಗೆ "ನಂಬಿಕೆ ದ್ರೋಹ" ಎಸಗಿರುವುದರ ಕುರಿತಾಗಿರುತ್ತದೆ.

(ಹೆಚ್) ಆಪಾದಿತ ಸರ್ಕಾರಿ ನೌಕರರ ವಿರುದ್ಧದ (2ನೇ) ಆರೋಪವು ಆಪಾದಿತ ಸರ್ಕಾರಿ ನೌಕರರು ದಿನಾಂಕ 11.1.2008ರ ಆದೇಶದಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿಯಿಂದ ವರ್ಗಾವಣೆ ಹೊಂದಿದ ನಂತರ ಅವರು ನಿರ್ವಹಿಸುತ್ತಿದ್ದ ಕಡತಗಳ/ದಾಖಲಾತಿಗಳ/ ವಹಿಗಳ/ಸೇವಾ ಪುಸ್ತಕಗಳ ಪ್ರಭಾರ ವಹಿಸದೇ ಇರುವುದರ ಕುರಿತಾಗಿದ್ದು, ಅವರ ವಿರುದ್ಧದ ಈ ಆರೋಪವು ಸಾಬೀತಾಗಿದ್ದರಿಂದ, ಆಪಾದಿತ ಸರ್ಕಾರಿ ನೌಕರರು, ಸರ್ಕಾರಿ ನೌಕರನೊಬ್ಬನಿಗೆ ಸಲ್ಲದ ರೀತಿಯಲ್ಲಿ ವರ್ತಿಸಿ ಸರ್ಕಾರದ ಜವಾಬ್ದಾರಿಯುತ ಹುದ್ದೆಯಲ್ಲಿ ಮುಂದುವರೆಯಲು ಸೂಕ್ತವಲ್ಲವೆಂದು ಪರಿಗಣಿಸತಕ್ಕದ್ದಾಗಿದೆ.

ಆಪಾದಿತ ಸರ್ಕಾರಿ ನೌಕರರು ರಾಮನಗರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿಯಲ್ಲಿ ದಿನಾಂಕ 31.1.2008ರಿಂದ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಅನಧಿಕೃತ ಗೈರು ಹಾಜರಾತಿಯಿಂದ ಆ ಕಚೇರಿಯ ಆಡಳಿತ ಮತ್ತು ಲೆಕ್ಕ ವಿಭಾಗದ ಕಾರ್ಯಗಳು ಸ್ಥಗಿತಗೊಂಡಿದ್ದರಿಂದ, ಹಾಗೂ ಅಪಾದಿತ ಸರ್ಕಾರಿ ನೌಕರರು ಅವರ ಅನಧಿಕೃತ ಗೈರು ಹಾಜರಾತಿಯನ್ನು ಮುಂದುವರೆಸಿದ್ದರಿಂದ, ಕಚೇರಿಯ ಕಾರ್ಯನಿರ್ವಹಣೆಗಾಗಿ ಅವರಿಗೆ ನೀಡಲಾದ ಕಪಾಟಿನ ಬೀಗವನ್ನು ತೆರೆಯಿಸಿ, ಅವರು ನಿರ್ವಹಿಸುತ್ತಿದ್ದ ಪತ್ರ ವ್ಯವಹಾರ, ಇನ್ನಿತರ ದಾಖಲಾತಿಗಳನ್ನು ಕಚೇರಿ ವಶಕ್ಕೆ ಪಡೆದುಕೊಂಡಿರುವುದರ ಕುರಿತಾಗಿದ್ದು, ಈ ಆರೋಪವು ಸಂಪೂರ್ಣವಾಗಿ ಸಾಬೀತಾಗಿದ್ದರಿಂದ, ಸರ್ಕಾರದ ಕರ್ತವ್ಯದಲ್ಲಿ ಅಡೆತಡೆ ಉಂಟುಮಾಡಿದ ಈ ಆರೋಪಿತ ಸರ್ಕಾರಿ ನೌಕರರು ಸರ್ಕಾರದ ಜವಾಬ್ದಾರಿಯುತ ಹುದ್ದೆಯಲ್ಲಿ ಮುಂದುವರೆಯಲು ಸಂಪೂರ್ಣವಾಗಿ ಅನರ್ಹರಾಗಿರುತ್ತಾರೆ.

ಐ) ಆಪಾದಿತರ ಮೇಲಿನ 4ನೇ ಆರೋಪವು ಆಪಾದಿತ ಸರ್ಕಾರಿ ನೌಕರರು ರಾಮನಗರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ, ಅದೇ ಕಚೇರಿಯಲ್ಲಿ ಅನುಕಂಪದ ಆಧಾರದ ಮೇಲೆ ನೇಮಕಾತಿ ಹೊಂದಿದ್ದ ದ್ವಿತೀಯ ದರ್ಜೆ ಸಹಾಯಕರಾದ ಕು॥ ಆರ್. ಜ್ಯೋತಿ ಅವರ ಅಕ್ಟೋಬರ್ 2007ರಿಂದ ಫೆಬ್ರವರಿ 2008ರ ವರೆಗಿನ ವೇತನಕ್ಕೆ ಸಂಬಂಧಿಸಿದಂತೆ, ಒಟ್ಟು ರೂ.34,774/–ರ ಬಿಲ್ಲನ್ನು, ಸ್ವತಃ ಆಪಾದಿತ ಸರ್ಕಾರಿ ನೌಕರರಾದ ಶ್ರೀ ಆದಿಕುಮಾರ್ ಇವರೇ ತಯಾರಿಸಿ ಖಜಾನೆಯಿಂದ ಅಷ್ಟೇ ಮೊತ್ತದ (ಅಂದರೆ ರೂ.34,774/–) ಚೆಕ್ ಸ್ವೀಕೃತಿಯಾದ ನಂತರ, ಅದನ್ನು ನಗದೀಕರಿಸಿ, ಆ ದ್ವಿತೀಯ ದರ್ಜೆ ಸಹಾಯಕರಿಗೆ ರೂ.32,774/– ಗಳನ್ನು ಮಾತ್ರ ವಿತರಿಸಿ, ಆಪಾದಿತ ಸರ್ಕಾರಿ ನೌಕರರಾದ ಶ್ರೀ ಆದಿಕುಮಾರ್ ಇವರು ರೂ.2000/–ಗಳಷ್ಟು ಸರ್ಕಾರದ ಹಣವನ್ನು ಸ್ವಂತಕ್ಕಾಗಿ ದುರ್ಬಳಕೆ ಮಾಡಿಕೊಂಡಿದ್ದಲ್ಲದೇ "ವೇತನ ಬಟವಾಡೆ ಪುಸ್ತಕದಲ್ಲಿ ರೂ.34,774/– ಎಂದು ಇದ್ದ ಮೊತ್ತವನ್ನು ರೂ.32,774/– ಎಂದು ತಿದ್ದಿ, ಸಂಬಂಧಿಸಿದ ದ್ವಿತೀಯ ದರ್ಜೆ ಸಹಾಯಕರಿಗೆ ವಂಚನೆ ಮಾಡಿರುವ ಮೇಲಾಧಿಕಾರಿಗಳಿಗೆ ದಾರಿ ತಪ್ಪಿಸುವ ಹಾಗೂ ಸರ್ಕಾರಕ್ಕೆ ಮೋಸ ಮಾಡುವಂತಹ ದುರುದ್ದೇಶದಿಂದ ಹಣಕಾಸಿನ ವಿಷಯಕ್ಕೆ ಸಂಬಂಧಿಸಿದ ದಾಖಲಾತಿಗಳನ್ನು ಅವರ ಸ್ವಹಿತ ದೃಷ್ಟಿಯಿಂದ ಬದಲಾಯಿಸಿ ದಂಡಾರ್ಹ ದುರ್ನಡತೆ (criminal misconduct) ಪ್ರದರ್ಶಿಸಿ ವಂಚನೆ ಹಾಗೂ ನಂಬಿಕೆ ದ್ರೋಹ ಎಸಗಿರುವುದರ ಕುರಿತು ಕು॥ ಆರ್. ಜ್ಯೋತಿ ರವರಿಗೆ ರೂ.34,774/–ಗಳ ವೇತನದಲ್ಲಿ ರೂ.2000/– ಗಳನ್ನು ಕಡಿಮೆ ಕೊಟ್ಟಿದ್ದು ಸಾಬೀತಾಗಿದೆ" ಎಂದು ವಿಚಾರಣಾ ವರದಿಯಲ್ಲಿ ವಿವರಿಸಿದ್ದನ್ನು ಪರಿಶೀಲಿಸಲಾಗಿ, ದಿನಾಂಕ 8.3.1984ರಂದು ಸರ್ಕಾರದ ಸೇವೆಗೆ ಸೇರಿದ ಆಪಾದಿತ ಸರ್ಕಾರಿ ನೌಕರರಾದ ಶ್ರೀ ಆದಿಕುಮಾರ್, ಇವರು 25 ವರ್ಷಕ್ಕೂ ಹೆಚ್ಚು ಸೇವೆ ಸಲ್ಲಿಸಿದ್ದು, ಹೊಸದಾಗಿ ಕರ್ತವ್ಯಕ್ಕೆ ಸೇರಿದ ಕು॥ ಜ್ಯೋತಿ, ದ್ವಿತೀಯ ದರ್ಜೆ ಸಹಾಯಕರಿಗೆ ಸರ್ಕಾರದ ಸೇವೆಯ ಮಹತ್ವ, ಕರ್ನಾಟಕ ನಾಗರೀಕ ಸೇವಾ ಹಾಗೂ ಇನ್ನಿತರ ನಿಯಮಾವಳಿಗೊಳಪಟ್ಟು ಕಾರ್ಯನಿರ್ವಹಿಸುವುದರ ಕುರಿತು ಮಾರ್ಗದರ್ಶನ ನೀಡುವುದರ ಬದಲಾಗಿ, ಆಪಾದಿತ ಸರ್ಕಾರಿ ನೌಕರರಾದ ಶ್ರೀ ಆದಿಕುಮಾರ್, ಇವರು ಸ್ವತಃ ಅನಧಿಕೃತ ಗೈರು ಹಾಜರಾತಿ, ಸರ್ಕಾರದ ಹಣದ ದುರುಪಯೋಗ, ದುರ್ನಡತೆ ಇತ್ಯಾದಿ ಅನೈತಿಕ ಚಟುವಟಿಕೆಗಳಲ್ಲಿ ನಿರತರಾಗಿ (indulged himself in illegal activities) ಕೇವಲ 2–3 ವರ್ಷಗಳಷ್ಟು ಸೇವೆ ಸಲ್ಲಿಸಿದ ದ್ವಿತೀಯ ದರ್ಜೆ ಸಹಾಯಕರಾದ ಮಹಿಳಾ ಸಿಬ್ಬಂದಿ ಯ ಎದುರು 25 ವರ್ಷಕ್ಕಿಂತ ಹೆಚ್ಚಿನ ಸೇವೆ ಸಲ್ಲಿಸಿದ ಆಪಾದಿತ ಸರ್ಕಾರಿ ನೌಕರರಾದ ಶ್ರೀ ಆದಿಕುಮಾರ್, ಇವರು ತಲೆ ತಗ್ಗಿಸುವಂತಹ ದುಷ್ಟತನದ ದುರ್ನಡತೆಯನ್ನು ಪ್ರದರ್ಶಿಸಿ, ಸರ್ಕಾರಿ ನೌಕರನೊಬ್ಬನಿಗೆ ಸಲ್ಲದಂತೆ ವರ್ತಿಸಿರುತ್ತಾರೆ.

(ಜೆ) ಆಪಾದಿತ ಸರ್ಕಾರಿ ನೌಕರರ ಮೇಲಿನ ಆರೋಪ(5) ಮತ್ತು (6)ರಲ್ಲಿ ಅನುಕಂಪದ ಆಧಾರದ ಮೇಲೆ ಹೊಸದಾಗಿ ಕರ್ತವ್ಯಕ್ಕೆ ಸೇರಿದ್ದ ಮಹಿಳಾ ಸಿಬ್ಬಂದಿಗಳಾದ ಶ್ರೀಮತಿ ವೀಣಾ ಕುಲಕರ್ಣಿ, ಗಣತಿದಾರರಿಂದ ರೂ.5600/– ಗಳನ್ನು ಹಾಗೂ ಶ್ರೀಮತಿ ಪಿ. ಮಂಜು, ಗಣತಿದಾರರಿಂದ ರೂ.2500/–ಗಳನ್ನು ಒತ್ತಾಯಪೂರ್ವಕವಾಗಿ ವಸೂಲು ಮಾಡಿ, ಆ ಇಬ್ಬರೂ ಮಹಿಳಾ ಸಿಬ್ಬಂದಿಗಳಿಗೆ ವಂಚನೆ/ ಮೋಸ ಮಾಡಿರುವುದಕ್ಕೆ ಸಂಬಂಧಪಟ್ಟಿರುತ್ತದೆ. ಈ ಎರಡೂ ಆಪಾದನೆಗಳಿಗೆ ಸಂಬಂಧಿಸಿದಂತೆ, ವಿಚಾರಣಾ ವರಿದಯನ್ನು ಪರಿಶೀಲಿಸಲಾಗಿ, "ಶ್ರೀಮತಿ ವೀಣಾ ಕುಲಕರ್ಣಿ, ಗಣತಿದಾರರಿಂದ ರೂ.5600/– ಗಳನ್ನು ಆಪಾದಿತರು ಮೋಸದಿಂದ ಪಡೆದಿರುವುದು ಅದೇ ರೀತಿ ಶ್ರೀಮತಿ ಪಿ. ಮಂಜು, ಗಣತಿದಾರರಿಂದ ರೂ.2500/–ಗಳನ್ನು ಆಪಾದಿತರು ವಂಚನೆಯಿಂದ ಸುಳ್ಳು ಕಾರಣ ಹೇಳಿ ಪಡೆದಿರುವುದು ಹಾಗೂ, ಹೊಸದಾಗಿ ಸರ್ಕಾರದ ಸೇವೆಗೆ ಸೇರಿದ ಮಹಿಳಾ ಸಹೋದ್ಯೋಗಿಗಳಿಗೆ ಅನ್ಯಾಯ ಮಾಡಿ ದುರ್ನಡತೆ ಎಸಗಿರುವುದು" ಸಾಬೀತಾಗಿದೆಯಾದ್ದರಿಂದ, ಆಪಾದಿತ ಸರ್ಕಾರಿ ನೌಕರರಾದ ಶ್ರೀ ಆದಿಕುಮಾರ್, ಇವರು ಈ ಪ್ರಕರಣದಲ್ಲಿ ವಿಶೇಷವಾಗಿ ಹೊಸದಾಗಿ ಸರ್ಕಾರದ ಸೇವೆಗೆ ಸೇರಿದ ಮಹಿಳಾ ಸಿಬ್ಬಂದಿಗಳಿಗೆ ಮೋಸ/ ವಂಚನೆ ಮಾಡಿ, ಗುರುತರವಾದ ದುರ್ನಡತೆ ಎಸಗಿರುವುದು ಸ್ಪಷ್ಟವಾಗಿ ಕಂಡು ಬರುತ್ತದೆ.

(ಕೆ) ಆಪಾದಿತ ಸರ್ಕಾರಿ ನೌಕರನ ಮೇಲಿನ (7)ನೇ ಆರೋಪವು ಆಪಾದಿತ ಸರ್ಕಾರಿ ನೌಕರನು ರಾಮನಗರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ದಿನಾಂಕ 1.5.2008 ರಿಂದ ದಿನಾಂಕ 30.6.2008ರ ವರೆಗೆ ಅನಧಿಕೃತ ಗೈರು ಹಾಜರಾಗಿದ್ದು, ಈ ಆರೋಪವನ್ನು ಸ್ವತಃ ಆಪಾದಿತರು ಸಾಬೀತುಪಡಿಸಿದ್ದಾರೆಂದು ವಿಚಾರಣಾ ವರದಿಯಲ್ಲಿ ಸ್ಪಷ್ಟಪಡಿಸಲಾಗಿದೆ. ಅದೇ ರೀತಿ 8ನೇ ಆರೋಪವು ಹಾಗೂ (10)ನೇ ಆರೋಪವು ಆಪಾದಿತರು ದಿನಾಂಕ 14.5.2007 ರಿಂದ ದಿನಾಂಕ 24.5.2007ರ ವರೆಗೆ ಅನಧಿಕೃತ ಗೈರು ಹಾಜರಾತಿ ಆಗಿದ್ದರ ಕುರಿತಾಗಿದ್ದು, ಅದೇ ಅವಧಿಯಲ್ಲಿ ಅವರನ್ನು "ನಂಜನಗೂಡು ಪೋಲೀಸ್ ಠಾಣೆ" ಯಲ್ಲಿ ಇಟ್ಟಿರುವುದಾಗಿ ಸ್ವತಃ ಆಪಾದಿತ ಸರ್ಕಾರಿ ನೌಕರರು ಮೌಖಿಕವಾಗಿ ಮಾಹಿತಿ ನೀಡಿರುತ್ತಾರೆಂಬುದರಕುರಿತಾಗಿರುತ್ತದೆ.

ಇಲಾಖಾ ವಿಚಾರಣಾ ಸಮಯದಲ್ಲಿ ಸ್ವತಃ ಆಪಾದಿತ ಸರ್ಕಾರಿ ನೌಕರರು "ಯಾವುದೋ ಅಪರಾಧಕ್ಕೆ ತಾನು ಈ ಅವಧಿಯಲ್ಲಿ ನಂಜನಗೂಡು ಪೋಲೀಸು ಠಾಣೆಯಲ್ಲಿದ್ದುದ್ದನ್ನು" ಒಪ್ಪಿಕೊಂಡಿದ್ದರಿಂದ, 8ನೇ ಆರೋಪದಲ್ಲಿನ "ಅನಧಿಕೃತ ಗೈರು ಹಾಜರಾತಿ" ಸಂಪೂರ್ಣವಾಗಿ ಸಾಬೀತಾಗಿರುತ್ತದೆ. "ಅಪರಾಧಿ ನಾನಲ್ಲವೆಂದು" ಆಪಾದಿತ ನೌಕರನು ಯಾವುದೇ ಕಾರಣಕ್ಕೂ ತಪ್ಪಿಸಿಕೊಳ್ಳಲು ಸಾದ್ಯವಿಲ್ಲವಾದ್ದರಿಂದ ಸರ್ಕಾರಿ ನೌಕರರೊಬ್ಬರು "ಯಾವುದೇ ಅಪರಾಧಕ್ಕೆ ಸಂಬಂಧಿಸಿದಂತೆ" ಪೋಲೀಸ್ ಠಾಣೆಯಲ್ಲಿರುವುದಾಗಿ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಗಳಿಗೆ ಹಾಗೂ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳಿಗೆ ಸಂಪೂರ್ಣವಾದ ವಿರುದ್ಧದ ವರ್ತನೆಯಾಗಿರುತ್ತದೆ, ಹಾಗೂ ಸರ್ಕಾರಿ ನೌಕರನೊಬ್ಬನಿಗೆ ಸಲ್ಲದ "ಕಾನೂನು ಬಾಹಿರ ಚಟುವಟಿಕೆಯಲ್ಲಿ" (illegal activitiദ) ತೊಡಗಿಸಿಕೊಂಡು ಪೋಲೀಸ್ ಠಾಣೆಯಲ್ಲಿದ್ದರಿಂದ, ಆಪಾದಿತರಿಗೆ ವಹಿಸಲಾಗಿದ್ದ ಸರ್ಕಾರದ ಕರ್ತವ್ಯಗಳ ನಿರ್ವಹಣೆಗೆ ತಡೆ ಉಂಟು ಮಾಡಿ ಅತ್ಯಂತ ಬೇಜವಾಬ್ದಾರಿಯಾಗಿ ವರ್ತಿಸಿರುವುದು ಸ್ಪಷ್ಟವಾಗಿ ಸಾಬೀತಾಗಿದೆ.

(ಎಲ್) ಆಪಾದಿತ ಸರ್ಕಾರಿ ನೌಕರರಾದ ಶ್ರೀ ಆದಿಕುಮಾರ್, ಅವರ ವಿರುದ್ಧದ (11)ನೇ ಆರೋಪವು "ಸ್ವತಃ ಕಚೇರಿ ಮುಖ್ಯಸ್ಥರಾಗಿದ್ದ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ (ಶ್ರೀ ಬಿ ಶ್ರೀನಿವಾಸಾಚಾರ್) ವೇತನ ವ್ಯತ್ಯಾಸದ ಹಣವನ್ನು ದುರುಪಯೋಗ ಮಾಡಿಕೊಂಡಿರುವುದು, ಹಾಗೂ, ಅದೇ ಕಚೇರಿಯ ಸಹಾಯಕ ನಿರ್ದೇಶಕರ (ಶ್ರೀ ಸಿದ್ದರಾಜು) ಪ್ರವಾಸದ ಬಿಲ್ಲು ಹಾಗೂ ಹಬ್ಬದ ಮುಂಗಡದ ಹಣವನ್ನು ಆಪಾದಿತರು ಸ್ವಂತಕ್ಕಾಗಿ

ದುರುಪಯೋಗ ಪಡಿಸಿಕೊಂಡಿರುವುದಕ್ಕೆ ಇಲಾಖಾ ವಿಚಾರಣೆಯಲ್ಲಿ ಸಂಪೂರ್ಣವಾಗಿ ಹಾಗೂ ನಿಸ್ಸಂಶಯವಾಗಿ ಸಾಬೀತಾಗಿರುತ್ತದೆ. ಆದ್ದರಿಂದ, ಇಂತಹ ಅಪರಾಧ ಮನೋಭಾವದ ವ್ಯಕ್ತಿಯನ್ನು ಅದೇ ಸೇವೆಯಲ್ಲಿ ಮುಂದುವರೆಸಿದಲ್ಲಿ ಅತ್ಯಂತ ಅಪಾಯಕಾರಿ ಬೆಳವಣಿಗೆಗೆ ಕಾರಣರಾಗುತ್ತಾರೆ.

(ಎಂ) ಆಪಾದಿತ ಸರ್ಕಾರಿ ನೌಕರರ ಮೇಲಿನ (12)ನೇ ಆರೋಪವು ಆಪಾದಿತ ಸರ್ಕಾರಿ ನೌಕರರು ಕೇಂದ್ರ ಕಚೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಶ್ರೀಮತಿ ಗಿರಿಯಮ್ಮ, ಗಣತಿದಾರರು, ಇವರಿಗೆ ಸಂಬಂಧಿಸಿದ ಕಡತವನ್ನು ನಿರ್ವಹಿಸುವಲ್ಲಿ ಎಸಗಿದ ಲೋಪದೋಷಗಳ ಕುರಿತು, ಇಂತಹ ಸಂದರ್ಭಗಳಲ್ಲಿ ಸಾಮಾನ್ಯವಾಗಿ ಸಂಬಂಧಿಸಿದ ಅಥವಾ ಆ ಕಡತಗಳನ್ನು ನಿರ್ವಹಿಸಿದ್ದ ಸಿಬ್ಬಂದಿಗಳ ವಿವರಣೆ ಪಡೆಯತಕ್ಕದ್ದಾಗಿದೆಯಾದ್ದರಿಂದ, ಆ ಕಡತವನ್ನು ಆಪಾದಿತ ಸರ್ಕಾರಿ ನೌಕರರು, ಕೇಂದ್ರ ಕಚೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ನಿರ್ವಹಿಸಿದ್ದರಿಂದ, ಅವರಿಗೆ ವಿವರಣೆ ಕೇಳಿ ಹೊರಡಿಸಲಾದ ಜ್ಞಾಪನಕ್ಕೆ ಸಂಬಂಧಿಸಿದಂತೆ, ಅದೇ ವಿಷಯದ ಕುರಿತು ಸೀಮಿತವಾಗಿ ವಿವರಣೆ ಸಲ್ಲಿಸತಕ್ಕದ್ದಾಗಿತ್ತೇ ಹೊರತು ಆಪಾದಿತ ಸರ್ಕಾರಿ ನೌಕರನು ದಿನಾಂಕ 29.10.2007ರಂದು ನೀಡಿದ ಅವರ ವಿವರಣೆಯಲ್ಲಿ ಇನ್ನಿತರ ವಿಷಯಗಳೊಂದಿಗೆ "ತಾನು ಯಾವುದೇ ಲೋಪದೋಷಗಳನ್ನು ಎಸಗದೆ ಇದ್ದಾಗಲೂ, ಅವರ ಮೇಲಿನ ವೈಯಕ್ತಿಕ ದ್ವೇಷ ಮತ್ತು ಸೇಡಿನಿಂದ ಆ ಜ್ಞಾಪನವನ್ನು ತನಗೆ ನೀಡುವಂತೆ ಮಾಡಿದ್ದರಿಂದ ಆತನಿಗೆ ಮಾನಸಿಕ ಹಿಂಸೆಯಾಗಿದ್ದು, ಆತನ ಕುಟುಂಬದವರೆಲ್ಲರೂ ಅತ್ಮಹತ್ಯೆ ಮಾಡಿಕೊಳ್ಳುತ್ತೇವೆಂದು ಹಾಗೂ ಈ ಅಪಾದಿತರಿಗೆ ಮಾನಸಿಕ ಹಿಂಸೆ ನೀಡುತ್ತಿರುವವರೇ ಅವರ ಆತ್ಮಹತ್ಯೆಗೆ ಕಾರಣರಾಗುತ್ತಾರೆಂದು, ಆಪಾದಿತರಿಗೆ ಜ್ಞಾಪನ ನೀಡಿದ ಇಲಾಖಾ ಮುಖ್ಯಸ್ಥರಿಗೆ ಹೆದರಿಸುವ (black mail) ಆತನ ವರ್ತನೆಯು ಸರ್ಕಾರಿ ನೌಕರರೊಬ್ಬನಿಗೆ ಸಲ್ಲದ ರೀತಿಯಲ್ಲಿರುತ್ತದೆ ಎಂಬುದಕ್ಕೆ ಸಂಬಂಧಪಟ್ಟಿದ್ದಾಗಿರುತ್ತದೆ.

ಇಲಾಖಾ ಮುಖ್ಯಸ್ಥರ ವಿರದ್ಧದ ಅವರ ಈ ಆರೋಪವನ್ನು ಪರಿಶೀಲಿಸಿ, ಕೇಂದ್ರ ಕಚೇರಿಯಿಂದ ಅವರನ್ನು ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿಗಳಿಗೆ ನಿಯೋಜಿಸಿ/ ವರ್ಗಾಯಿಸಿದ ನಂತರವೂ ಅವರ ಅನಧಿಕೃತ ಗೈರು ಹಾಜರಾಗಿ ಕರ್ತವ್ಯಲೋಪ, ದುರ್ನಡತೆ, ಸರ್ಕಾರದ ಹಣದ ದುರುಪಯೋಗ ನಿರಂತರವಾಗಿ ಆ ಕಚೇರಿಯಲ್ಲಿಯೂ ಮುಂದುವರೆಸಿದ್ದರಿಂದ ಅವರಿಗೆ ಹಲವಾರು ಜ್ಞಾಪನಗಳನ್ನು ನೀಡುವ, ಅವರನ್ನು ಸೇವೆಯಿಂದ ಅಮಾನತ್ತುಗೊಳಿಸುವಂತಹ ಪರಿಸ್ಥಿತಿಗೆ ಸ್ವತಃ ಅವರೇ ಕಾರಣರಾಗಿದ್ದರೂ, "ಅದೊಂದ ಮಾನಸಿಕ ಹಿಂಸೆ" ಎಂದು ಪರಿಗಣಿಸಿಕೊಂಡು "ಆತ್ಮಹತ್ಯೆ" ಮಾಡಿಕೊಂಡಿದ್ದಲ್ಲಿ ಅದು ಅವರ cognizable offence ಎಂದು (ತಕ್ಷಣ ಪೋಲೀಸರವರು ದಸ್ತಗಿರಿ ಮಾಡಬಹುದಾದ ಅಪರಾಧ) ಪರಿಗಣಿಸುವಂತೆ ಸೂಚಿಸಲಾಗಿತ್ತು ಹಾಗೂ ಆ ಕಡತದ ನಿರ್ವಹಣೆಯಲ್ಲಿ ಎಸಗಿದ ಲೋಪದೋಷಕ್ಕೆ ವಿವರಣೆ ಸಲ್ಲಿಸುವಂತೆ ಸೂಚಿಸಲಾಗಿತ್ತಾದರೂ, ಅವರು ಯಾವುದೇ ವಿವರಣೆ ನೀಡಿರುವುದಿಲ್ಲ. ಆಪಾದಿತ ಸರ್ಕಾರಿ ನೌಕರರಿಗೆ ಕಚೇರಿಯಿಂದ ನೀಡಲಾದ ಒಂದು ಜ್ಞಾಪನಕ್ಕೆ ಮಾನಸಿಕೆ ಹಿಂಸೆ ನೀಡಿದಂತಾಗುತ್ತದೆ ಎಂದು ಇಲಾಖಾ ಮುಖ್ಯಸ್ಥರನ್ನು ಹೆದರಿಸುವ ಈ "ಆಪಾದಿತ ಸರ್ಕಾರಿ ನೌಕರನ" ವರ್ತನೆಯು ಸರ್ಕಾರಿ ನೌಕರನೊಬ್ಬನಿಗೆ ಸಲ್ಲದ ವರ್ತನೆಯಾಗಿರುತ್ತದೆಯಾದ್ದರಿಂದ ಆತನ ಮೇಲಿನ 12ನೇ ಆರೋಪವು, ಇಲಾಖಾ ವಿಚಾರಣೆಯಲ್ಲಿ ಸ್ಪಷ್ಟವಾಗಿ ಸಾಬೀತಾಗಿದೆ.

ಮೇಲಿನ ಇಲಾಖಾ ವಿಚಾರಣೆಗೆ ಸಂಬಂಧಿಸಿದ ಆರೋಪಗಳಲ್ಲದೇ ಆಪಾದಿತ ಸರ್ಕಾರಿ ನೌಕರರ ಸಂಕ್ಷಿಪ್ತ ಸೇವಾ ಚರಿತ್ರೆಯನ್ನು ಪರಿಶೀಲಿಸಲಾಗಿ, ಸದರಿಯವರು 1992, 1993 ಮತ್ತು 1994ನೇ 3 ವರ್ಷಗಳಲ್ಲಿ ಈ ಕೆಳಗೆ ತಿಳಿಸಲಾದ ಅವಧಿಗೆ ಅನಧಿಕೃತ ಗೈರು ಹಾಜರಾಗಿದ್ದು, ಈ ನಿರ್ದೇಶನಾಲಯದ ಆದೇಶದ ಸಂಖ್ಯೆ: ಆಡಳಿತ/616/94–95, ದಿನಾಂಕ 24.2.1995 ರಲ್ಲಿ ಆ ಅವಧಿಯನ್ನು ಸಕ್ರಮಗೊಳಿಸಿ, ಈ ಕೆಳಕಂಡಂತೆ ರಜೆ ಮಂಜೂರು ಮಾಡಲಾಗಿದೆ.

| | **ದಿನಾಂಕ** | **ದಿನಗಳು** |
|---|---|---|
| | **1** | **2** |
| 1 | 24.8.1992 ರಿಂದ 7.11.1992ರ ವರೆಗೆ | 76 ದಿನಗಳು ಅಸಾಧಾರಣ ರಜೆ (EOL) |
| 2 | 26.1.1992 ರಿಂದ 20.1.1994ರ ವರೆಗೆ | 360 ದಿನಗಳು ಹಕ್ಕಿನಲ್ಲಿಲ್ಲದರಜೆ (Leave not due) |
| 3 | 21.1.1994 ರಿಂದ 17.5.1994ರ ವರೆಗೆ | 117 ದಿನಗಳು ಅಸಾಧಾರಣ ರಜೆ (EOL) |
| | **ಒಟ್ಟು** | **553 ದಿನಗಳು** |

ಮೇಲಿನ ಆದೇಶವನ್ನು ಪರಿಶೀಲಿಸಲಾಗಿ, ಸದರಿಯವರಿಗೆ **ಒಟ್ಟು 553 ದಿನಗಳಷ್ಟು ರಜೆ ಮಂಜೂರಾತಿ ಮಾಡಿರುವುದು (ವಿಶೇಷವಾಗಿ ಒಂದೇ ಸಲಕ್ಕೆ 360 ದಿನಗಳಷ್ಟು ಹಕ್ಕಿನಲ್ಲಿಲ್ಲದ ರಜೆ ಮಂಜೂರಾತಿ ಮಾಡಿರುವುದು**) ನಿಯಮಗಳಿಗೆ ವಿರುದ್ಧವಾದ್ದರಿಂದ, ಈ ಬಗ್ಗೆ ಪ್ರತ್ಯೇಕವಾಗಿ ಪತ್ರ ವ್ಯವಹಾರ ಮಾಡಲಾಗುತ್ತಿದೆ.

ಇದೇ ಆಪಾದಿತ ಸರ್ಕಾರಿ ನೌಕರರಾದ ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರು, ಕೇಂದ್ರ ಕಚೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವದಿಯಲ್ಲಿ (ಪ್ರಭಾರ ಅಧೀಕ್ಷಕರಾಗಿ ಕೂಡ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯನ್ನೂ ಸೇರಿಸಿ) ವಿಶೇಷವಾಗಿ 2003, 2004 ಮತ್ತು 2005ನೇ ಸಾಲಿನಲ್ಲಿ ಅನಧಿಕೃತ ಗೈರು ಹಾಜರಾತಿ, ಕರ್ತವ್ಯ ನಿರ್ವಹಣೆಯಲ್ಲಿ ಗಂಭೀರ ಸ್ವರೂಪದ ಅನೇಕ ಲೋಪದೋಷಗಳು, ದುರ್ನಡತೆ ಎಸಗಿದ್ದಲ್ಲದೆ, ಅನಧಿಕೃತ ಗೈರು ಹಾಜರಾಗಿದ್ದರಿಂದ, ಕೇಂದ್ರ ಕಚೇರಿಯಲ್ಲಿ ಅವರ ವಶದಲ್ಲಿದ್ದ ಕೇಂದ್ರ ಕಚೇರಿಯ ನೌಕರರ ಸೇವಾ ವಿಷಯಕ್ಕೆ ಸಂಬಂಧಿಸಿದ ಕಡತಗಳನ್ನು ಸೇವಾ ಪುಸ್ತಕಗಳನ್ನು ಹಾಗೂ ವಿಲೇವಾರಿ ಮಾಡದೇ ಬಾಕಿ ಇರಿಸಿಕೊಂಡಿದ್ದ ಹಲವಾರು ಪತ್ರವ್ಯವಹಾರಗಳನ್ನು ಅವರಿಗೆ ನೀಡಲಾದ ಕಪಾಟಿನ ಬೀಗವನ್ನು ಕೇಂದ್ರ ಕಚೇರಿಯ ಅಧಿಕಾರಿಗಳ ಮತ್ತು ಆಡಳಿತ ವಿಭಾಗದ ಸಿಬ್ಬಂದಿಗಳ ಉಪಸ್ಥಿತಿಯಲ್ಲಿ ಬಲವಂತವಾಗಿ ತೆಗೆಯಿಸಿ ಬೇರೆ ಸಿಬ್ಬಂದಿಗೆ ವಹಿಸಿ, ವಿಲೇವಾರಿ ಮಾಡುವಂತಹ ಕ್ರಮ ವಹಿಸಲಾಗಿತ್ತು

ಮೇಲೆ ವಿವರಿಸಿದಂತೆ ಆಪಾದಿತ ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರು ಇವರ ಅನಧಿಕೃತ ಗೈರು ಹಾಜರಿಯಿಂದ ಅವರು ನಿರ್ವಹಿಸುತ್ತಿದ್ದ ಕಡತಗಳನ್ನು/ದಾಖಲಾತಿಗಳನ್ನು ನಿಯಮಾನುಸಾರ ಬಲವಂತವಾಗಿ ಕಚೇರಿಯ ವಶಕ್ಕೆ ತೆಗೆದುಕೊಂಡಿದ್ದರಿಂದ ಹಾಗೂ ಅವರ ವಿರುದ್ಧ ಕರ್ತವ್ಯ ನಿರ್ವಹಣೆಯಲ್ಲಿನ ಅನೇಕ ಲೋಪದೋಷಗಳು ಸಾಬೀತಾಗುವ ಸಾಧ್ಯತೆಯನ್ನು ನಾಶಗೊಳಿಸುವ ಉದ್ದೇಶದಿಂದ ಸದರಿ ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರು **"ದಿನಾಂಕ 10.3.2005 ರಂದು ಬೆಳಿಗ್ಗೆ 8.30 ಗಂಟೆಗೆ ಆಡಳಿತ ವಿಭಾಗದ ಸಿಬ್ಬಂದಿಗಳು ಕರ್ತವ್ಯಕ್ಕೆ ಹಾಜರಾಗುವ ಪೂರ್ವದಲ್ಲಿಯೇ ಆಡಳಿತ ವಿಭಾಗದಲ್ಲಿನ ಅಲ್ಮೇರಾ ಸಂಖ್ಯೆ:ಎಜಿಸಿ 16–01ರ ಬೀಗವನ್ನು ಅವರಲ್ಲಿದ್ದ ಕೀಲಿ ಕೈಯಿಂದ ತೆರೆದು ಅದರಲ್ಲಿದ್ದ 61 ಪತ್ರ ವ್ಯವಹಾರಗಳನ್ನು, ಆರು ಸೇವಾ ಪುಸ್ತಕಗಳನ್ನು ಹಾಗೂ ಇನ್ನಿತರ ದಾಖಲಾತಿಗಳನ್ನು ತೆಗೆದುಕೊಂಡು ಹೋಗಿರುವುದನ್ನು** ಹಾಗೂ ಕಚೇರಿ ಆದೇಶದ ದಿನಾಂಕ 27.11.2004ಲ್ಲಿ, ಸದರಿಯವರು ಅನರ್ಹರಾಗಿದ್ದರೂ, ರೂ.4575–8400ರ ವೇತನ ಶ್ರೇಣಿಯಲ್ಲಿ ದಿನಾಂಕ 3.3.1999ರಿಂದ ಜಾರಿಗೆ ಬರುವಂತೆ, ಸ್ವಯಂಚಾಲಿತ ವಿಶೇಷ ವೇತನ ಬಡ್ತಿ ಮಂಜೂರು ಮಾಡಿಕೊಂಡಿದ್ದು, ಕಚೇರಿಯ ದಾಖಲಾತಿಗಳನ್ನು/ ಸೇವಾ ಪುಸ್ತಕಗಳನ್ನು ಕಚೇರಿಯಲ್ಲಿ ಯಾರೂ ಇಲ್ಲದ ಸಮಯದಲ್ಲಿ ತೆಗೆದುಕೊಂಡು ಹೋಗಿದ್ದ ಘಟನೆಗೆ ಸಂಬಂಧಿಸಿದಂತೆ, ಅವರ ವಿರುದ್ಧ ಸಂಬಂಧಿಸಿದ ಪೋಲೀಸ್ ಠಾಣೆಯಲ್ಲಿ ದೂರು ನೀಡುವ ಕುರಿತು ಪರಿಶೀಲಿಸುತ್ತಿದ್ದ ಹಂತದಲ್ಲಿ ದಿನಾಂಕ 14.5.2005ರಂದು (ದಿನಾಂಕ 10.3.2005ರ ಘಟನೆಯ 5ನೇ ದಿನ) ಈ ಆಪಾದಿತ ಸರ್ಕಾರಿ ನೌಕರರು ಕೇಂದ್ರ ಕಚೇರಿಯಲ್ಲಿ ಹಾಜರಾಗಿ, ಅವರು ದಿನಾಂಕ 10.3.2005ರಂದು ಮಾಡಿದ್ದೆಲ್ಲವನ್ನು/ ಎಸಗಿದ್ದೆಲ್ಲವನ್ನು ಒಪ್ಪಿಕೊಂಡು, ದಿನಾಂಕ 14.5.2005ರಂದು ಒಂದು ಮನವಿ ಸಲ್ಲಿಸಿದ್ದು, ಅದನ್ನು ಈ ಕೆಳಗೆ ಪುನರುಚ್ಚರಿಸಲಾಗಿದೆ:–

**ನಿವೇದನೆ–**

**"**ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರಾದ ನಾನು ತಮ್ಮಲ್ಲಿ ಈ ಮೂಲಕ ಕೋರಿಕೊಳ್ಳುವುದೇನೆಂದರೆ, ಈ ದಿನ ಅಂದರೆ ದಿನಾಂಕ 14.3.2005ರಂದು ಆಡಳಿತಾಧಿಕಾರಿಗಳವರ ಕೊಠಡಿಯಲ್ಲಿ ಜರುಗಿದ ಅಧೀಕ್ಷಕರ ಸಭೆಯಲ್ಲಿ ನಾನು ಪ್ರಸ್ತುತ ನಿರ್ವಹಿಸುತ್ತಿರುವ ವಿಭಾಗದ ಪ್ರಭಾರವನ್ನು ಬೇರೊಬ್ಬರಿಗೆ ವಹಿಸಿಕೊಡುವಂತೆ ಮಾನ್ಯ ಆಡಳಿತಾಧಿಕಾರಿಗಳು ಸೂಚನೆ ನೀಡಿರುತ್ತಾರೆ. ಇದಕ್ಕೆ ಕಾರಣ ನನ್ನ ವಿಭಾಗದಲ್ಲಿ ಬಹಳಷ್ಟು ಕಡತಗಳು ಬಾಕಿ ಇದ್ದು, ನನ್ನಿಂದ ಪ್ರಮಾದವಶಾತ್ ತಪ್ಪೊಂದು ನಡೆದು ಹೋಗಿರುತ್ತದೆ. ಆದರೆ ಇನ್ನು ಮುಂದೆ ಈ ರೀತಿ ಆಗದಂತೆ ನಾನು ಜವಾಬ್ದಾರಿಯಿಂದ ಕೆಲಸ ನಿರ್ವಹಿಸುತ್ತೇನೆ ಹಾಗೂ ಯಾವುದಾದರೂ ಕಡತ/ ಪತ್ರಗಳು ಕಣ್ಮರೆಯಾದಲ್ಲಿ ಅದರ ಜವಾಬ್ದಾರಿ ನನ್ನದೇ ಆಗಿರುತ್ತದೆ. ಆದ್ದರಿಂದ, ಪ್ರಸ್ತುತ ನನ್ನ ಅಧೀಕ್ಷಕರ ಹೆಚ್ಚಿನ ಪ್ರಭಾರವನ್ನು ಶ್ರೀಯುತ ಆನಂದಗೋಪಾಲನ್ ರವರಿಗೆ ವಹಿಸಿ ಕನಿಷ್ಠ ಪಕ್ಷ ನನ್ನನ್ನು ವಿಷಯ ನಿರ್ವಾಹಕರ ಹುದ್ದೆಯಲ್ಲಿಯೇ ಮುಂದುವರೆಸಬೇಕೆಂದು, ಬಾಕಿ ಉಳಿದಿರುವ ಎಲ್ಲಾ ಕಡತ/ ಪತ್ರಗಳನ್ನು ಇನ್ನು 15 ದಿನಗಳೊಳಗಾಗಿ ವಿಲೇವಾರಿ ಮಾಡುತ್ತೇನೆಂದು ಕೇಳಿಕೊಳ್ಳುತ್ತಾ, ನನ್ನ ಮನವಿಯನ್ನು ಸಹಾನುಭೂತಿಯಿಂದ ಪರಿಗಣಿಸಬೇಕೆಂದು ಕೋರುತ್ತೇನೆ. ಮತ್ತು ನನ್ನ ಸಹೋದ್ಯೋಗಿಗಳಿಂದ ಏನಾದರೂ ಬಂದಲ್ಲಿ ಕೂನೂನಿನನ್ವಯ ಕ್ರಮ ಕೈಗೊಳ್ಳಲು ಸಹ ಕೋರಿದ್ದೇನೆ.

ಬೆಂಗಳೂರು, ದಿ:14.03.2005

ಸಹಿ

(ಆದಿಕುಮಾರ್)

ಮೇಲಿನ ದಿನಾಂಕ 14.03.2005ರಂದು ಸಲ್ಲಿಸಿದ್ದ ಅವರ 'ನಿವೇದನೆಯಲ್ಲಿ' "ಇನ್ನುಮುಂದೆ ನಾನು ಜವಾಬ್ದಾರಿಯಿಂದ ಕೆಲಸ ನಿರ್ವಹಿಸುತ್ತೇನೆ" ಎಂದು ಲಿಖಿತವಾಗಿ ತಿಳಿಸಿದ್ದಾಗ್ಯೂ, ಪ್ರಸ್ತುತ ಇಲಾಖಾ ವಿಚಾರಣೆಗೆ ಸಂಬಂಧಿಸಿದಂತೆ, ಈ ಆಪಾದಿತರ ವಿರುದ್ಧದ 12 ಆರೋಪಗಳಲ್ಲಿ, 11 ಆರೋಪಗಳು ನಿಸ್ಸಂಶಯವಾಗಿ ಸಾಬೀತಾಗಿದ್ದರಿಂದ, ಸರ್ಕಾರಿ ನೌಕರನೊಬ್ಬನಿಗೆ ಸಲ್ಲದ ರೀತಿಯಲ್ಲಿ ನಿರಂತರವಾಗಿ ವರ್ತಿಸುತ್ತಿರುವ ಇಂತಹ ಆಪಾದಿತ ಸರ್ಕಾರಿ ನೌಕರರನ್ನು ಅದೇ ಹುದ್ದೆಯಲ್ಲಿ ಮುಂದುವರೆಸುವುದು ಸೂಕ್ತವೇ ಅಥವಾ ಮುಂದುವರೆಸಿದಲ್ಲಿ ಉಂಟಾಗುವ ಪರಿಣಾಮಗಳ ಬಗ್ಗೆ ಯೋಚಿಸತಕ್ಕದ್ದಾಗಿದೆ.

ಪ್ರಸ್ತುತ ಇಲಾಖಾ ವಿಚಾರಣೆಯನ್ನು ಮುಂದುವರೆಸುತ್ತಾ ಆಪಾದಿತ ಸರ್ಕಾರಿ ನೌಕರರಾದ ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರು, ಸರ್ಕಾರದ ಸೇವೆಯಿಂದ ಅಮಾನತ್ತುಗೊಂಡ ನಂತರ, ಅವರ ಮನೆ ವಿಳಾಸವಿಲ್ಲದೇ ನೇರವಾಗಿ ಸರ್ಕಾರಕ್ಕೆ ಸಲ್ಲಿಸಲಾದ ಅವರ ಮನವಿ ದಿನಾಂಕ 26.8.2008ರಲ್ಲಿ **"ಕೆಲವೊಂದು ಆಡಳಿತಾತ್ಮಕ ಕಾರಣಗಳಿಂದ ಅವರನ್ನು ದಿನಾಂಕ 25.7.2008 ರಿಂದ ಅಮಾನತ್ತಿನಲ್ಲಿರಿಸಲಾಗಿದೆ. ಆದರೆ ಅವರು ನಿರ್ಧೋಷಿಯಾಗಿದ್ದು, ಅದನ್ನು ಇಲಾಖಾ ವಿಚಾರಣೆ ನಡೆಸಿದಲ್ಲಿ ನನ್ನ ನಿರ್ಧೋಷಿತನವನ್ನು ಸಾಬೀತುಪಡಿಸುತ್ತೇನೆ ಎಂದು ಸರ್ಕಾರಕ್ಕೆ ಸವಾಲೊಡ್ಡಿದ್ದರೂ,** (he had challenged directly to Government) ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಗಳು, 1957ರ ನಿಯಮ:11ರ ಅಡಿಯಲ್ಲಿ ಅವರಿಗೆ ನೀಡಲಾದ "ಕಾರಣ ಕೇಳುವ ಜ್ಞಾಪನಕ್ಕೆ" ಸಾಕಷ್ಟು ಕಾಲಾವಕಾಶ ನೀಡಿದ ನಂತರವೂ ಅವರ ವಿವರಣೆ ಸಲ್ಲಿಸದೇ ಇರುವುದನ್ನು ಅದೇ ರೀತಿ, ಆತನ ವಿರುದ್ಧದ ಇಲಾಖಾ ವಿಚಾರಣಾ ವರದಿಯನ್ನು ಅವರಿಗೆ ಒದಗಿಸಿ, ಅವರ ವಿವರಣೆಯನ್ನು ಒದಗಿಸುವಂತೆ ಸೂಚಿಸಲಾದ ನಂತರವೂ, ಹಲವಾರು ಕಾರಣಗಳನ್ನು ನೀಡುತ್ತಾ, ಅದಕ್ಕೂ ಅವರ ವಿವರಣೆಯನ್ನು ಸಲ್ಲಿಸುವುದರಲ್ಲಿ ವಿಫಲರಾಗಿದ್ದರಿಂದ, ಆತನ ವಿರುದ್ಧದ ಎಲ್ಲಾ ಆರೋಪಗಳನ್ನು ಅವರೇ ಸ್ವಯಂ ಆಗಿ ಒಪ್ಪಿಕೊಂಡಂತಾಗಿದೆ, ಹಾಗೂ ಇಲಾಖಾ ವಿಚಾರಣಾ ವರದಿಯಲ್ಲಿ, ಆಪಾದಿತ ಸರ್ಕಾರಿ ನೌಕರರು **"ತನ್ನ ಕೆಲಸದಲ್ಲಿ ನಿರ್ಲಕ್ಷತೆ, ಇತರರಿಗೆ ಮೋಸ, ವಂಚನೆ, ಹಣದ ದುರುಪಯೋಗ ಇತ್ಯಾದಿ ತಪ್ಪು ಮಾಡಿರುವುದು ಸ್ಪಷ್ಟವಾಗಿ ಸಾಬೀತಾಗಿರುತ್ತದೆಯಾದ್ದರಿಂದ"** ಅವರ ವಿರುದ್ಧ ಹಲವಾರು ಆರೋಪಗಳು (multiple charges) ಸಾಬೀತಾಗಿರುತ್ತವೆ.

ಸರ್ಕಾರದ ಸೇವೆಗೆ 1984ರಲ್ಲಿ ಸೇರಿದ ಆಪಾದಿತ ಸರ್ಕಾರಿ ನೌಕರರು, ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿಯಲ್ಲಿ ಮತ್ತು ಹೆಚ್ಚಿನ ಸೇವೆಯನ್ನು ಕೇಂದ್ರ ಕಚೇರಿಯಲ್ಲೇ ಸಲ್ಲಿಸಿ, ವಿಶೇಷವಾಗಿ ಆಡಳಿತ ವಿಭಾಗದಲ್ಲಿ (Administration Section) ಅಧಿಕಾರಿಗಳ/ ಸಿಬ್ಬಂದಿಗಳ ಸೇವಾ ವಿಷಯವನ್ನು (including disciplinary proceedings) ನಿರ್ವಹಿಸಿದ **"ಅಪಾರವಾದ ಅನುಭವ"** ಹೊಂದಿದ್ದ ಇವರು ಮೇಲೆ ವಿವರಿಸಲಾದ ಹಲವಾರು ಆರೋಪಗಳನ್ನು (multiple charges) ಎಸಗಿದ್ದನ್ನು ಪರಿಶೀಲಿಸಲಾಗಿ, ಇವರು ಸರ್ಕಾರದ ಪ್ರಸ್ತುತ ಹುದ್ದೆಯಲ್ಲಿ ಮುಂದುವರೆಯಲು ಅನರ್ಹರೆಂದು ಸಾಬೀತಾಗುತ್ತದೆ.

ಒಟ್ಟಾರೆ ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರು ಇವರ ವಿರುದ್ಧದ **12 ಗಂಭೀರ ಸ್ವರೂಪದ ಆರೋಪಗಳಲ್ಲಿ, 11 ಆರೋಪಗಳು ಇಲಾಖಾ ವಿಚಾರಣೆಯಲ್ಲಿ** ಸಾಬೀತಾಗಿದ್ದು, ಇಂಥಹವರು ಅದೇ ಸೇವೆಯಲ್ಲಿ ಮುಂದುವರೆದಲ್ಲಿ ಇಂತಹದೇ ದುಷ್ಕೃತ್ಯಗಳಲ್ಲಿ ತೊಡಗಿಸಿಕೊಳ್ಳುವ ಸಾಧ್ಯತೆ ಇರುವುದರಿಂದ, ಹಾಗೂ ಇಂತಹವರನ್ನು ಸರ್ಕಾರದ ಸೇವೆಯಲ್ಲಿನ ಯಾವುದೇ ಜವಾಬ್ದಾರಿಯುತ ವೃಂದದಲ್ಲಿ ಮುಂದುವರೆಸಿದಲ್ಲಿ, ಆಡಳಿತ/ ಲೆಕ್ಕ ವಿಭಾಗದ ಕರ್ತವ್ಯಗಳ ಜವಾಬ್ದಾರಿಗಳನ್ನೇ ವಹಿಸಬೇಕಾಗುತ್ತದೆಯಾದ್ದರಿಂದ, ಬೇರೆ ಸಿಬ್ಬಂದಿಗಳನ್ನೂ ಅವರದೇ ದಾರಿಗೆ ಎಳೆಯಲು ಪ್ರಯತ್ನಿಸಿ, ಅವರನ್ನು ಹಾಳು ಮಾಡುವ ಸಾಧ್ಯತೆ ಇರುವುದರಿಂದ, ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ:

**ಕಚೇರಿ ಆದೇಶ ಸಂಖ್ಯೆ:ಆಡಳಿತ/495/2010-11**

ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದ ನಿರ್ದೇಶಕರು ಮತ್ತು ಶಿಸ್ತು ಪ್ರಾಧಿಕಾರ ಆಗಿರುವ ನಾನು ನಿವೃತ್ತ ಜಿಲ್ಲಾ ನ್ಯಾಯಾಧೀಶರೂ ಆದ ವಿಚಾರಣಾಧಿಕಾರಿಗಳು ಸಲ್ಲಿಸಿರುವ ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರು ಇವರ ವಿರುದ್ಧದ ವಿಚಾರಣಾ ವರದಿಯನ್ನು ಅತ್ಯಂತ ಸೂಕ್ಷ್ಮವಾಗಿ ಪರಿಶೀಲಿಸಲಾಗಿ ವಿಚಾರಣಾಧಿಕಾರಿಗಳು, ವಿಚಾರಣಾ ಸಂದರ್ಭದಲ್ಲಿ ಲಭ್ಯವಿರುವ ಮಾಹಿತಿಯನ್ನು ಮತ್ತು ಪುರಾವೆಗಳನ್ನು ತುಲನೆ ಮಾಡಿ ವಿಚಾರಣೆ ಸಮಯದಲ್ಲಿ ಆಪಾದಿತ ಸರ್ಕಾರಿ ನೌಕರನಿಗೆ ತನ್ನನ್ನು ರಕ್ಷಿಸಿಕೊಳ್ಳಲು ಸಾಕಷ್ಟು ಅವಕಾಶ ನೀಡಿದ್ದಾಗ್ಯೂ, ಅಪಾದಿತ ಸರ್ಕಾರಿ ನೌಕರರ ವಿರುದ್ಧದ 12 ವಿವಿಧ ಆರೋಪಗಳಲ್ಲಿ (multiple charges) 11 ಆರೋಪಗಳು ಸಾಬೀತಾಗಿರುತ್ತವೆ. ವಿಚಾರಣಾದಿಕಾರಿಗಳು ನಿಜಕ್ಕೂ ಈ ಆಪಾದನೆಗಳನ್ನು ನ್ಯಾಯಬದ್ಧವಾಗಿ ಇಲಾಖಾ ವಿಚಾರಣೆ ನಡೆಸಿ ರುಜುವಾತು ಪಡಿಸಿರುತ್ತಾರೆ.

ಆಪಾದಿತ ಸರ್ಕಾರಿ ನೌಕರನು ಆತನಿಗೆ 2ನೇ ಕಾರಣ ಕೇಳುವ ಜ್ಞಾಪನದೊಂದಿಗೆ ಒದಗಿಸಲಾದ ಇಲಾಖಾ ವಿಚಾರಣಾ ವರದಿಗೆ ಸಂಬಂಧಿಸಿದಂತೆ, ಗರಿಷ್ಠ (maximum) ಕಾಲಾವಕಾಶ ನೀಡಿದ ನಂತರವೂ ಲಿಖಿತ ವಿವರಣೆ ಸಲ್ಲಿಸದೇ ಇರುವುದರಿಂದ, ಆಪಾದಿತ ಸರ್ಕಾರಿ ನೌಕರರ ವಿರುದ್ಧದ **12 ವಿವಿಧ ಆರೋಪಗಳಲ್ಲಿ 11 ವಿವಿಧ ಆರೋಪಗಳು** (multiple charges) ಸಾಬೀತಾಗಿದ್ದನ್ನು ಪರಿಗಣಿಸಿ, **"ಮಾಡಿರುವ ತಪ್ಪಿಗೆ ಸಮನಾದ ಶಿಕ್ಷೆ"** ಎಂಬಂತೆ ಹಾಗೂ ಸರ್ಕಾರದ ಸುತ್ತೋಲೆ ಸಂಖ್ಯೆ:ಸಿಆಸುಇ 18 ಬೇಇವಿ 2001, ದಿನಾಂಕ 14.9.2001ರಲ್ಲಿ ವಿವರಿಸಲಾದ **"ಯಾವ ಯಾವ ದುರ್ನಡತೆಗಳಿಗೆ ಯಾವ ಯಾವ ದಂಡನೆಗಳು ಯೋಗ್ಯ"** ವೆಂಬುದನ್ನು ಪರಿಶೀಲಿಸಿ, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದ ನಿರ್ದೇಶಕರು ಮತ್ತು ಶಿಸ್ತು ಪ್ರಾಧಿಕಾರ ಆಗಿರುವ ನಾನು ಶ್ರೀ ಆದಿಕುಮಾರ್, ಈ ನಿರ್ದೇಶನಾಲಯದ ಪ್ರಥಮ ದರ್ಜೆ ಸಹಾಯಕರು, ಪ್ರಸ್ತುತ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿ, ಕೋಲಾರ ಇವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 8(v) ರ ಅನ್ವಯ "ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರು, ಇವರನ್ನು ಪ್ರಸ್ತುತ ಅವರು ಹೊಂದಿರುವ ರೂ.7275-13350ರ ವೇತನ ಶ್ರೇಣಿಯ ಪ್ರಥಮ ದರ್ಜೆ ಸಹಾಯಕರ ಹುದ್ದೆಯಿಂದ ರೂ.5800-10500ರ ವೇತನ ಶ್ರೇಣಿಯ ದ್ವಿತೀಯ ದರ್ಜೆ ಸಹಾಯಕರ ಹುದ್ದೆಗೆ ಖಾಯಂ ಆಗಿ ಇಳಿಸಲಾಗಿದೆ ಹಾಗೂ ಅವರ ವೇತನವನ್ನು ದ್ವಿತೀಯ ದರ್ಜೆ ಸಹಾಯಕರ ವೇತನ ಶ್ರೇಣಿ ರೂ.5800-10500ರಲ್ಲಿ ಮೂಲ ವೇತನ ರೂ.5800/- ನಿಗದಿ ಪಡಿಸಲಾಗಿದೆ ಹಾಗೂ ಇವರು ದ್ವಿತೀಯ ದರ್ಜೆ ಸಹಾಯಕರ ವೇತನ ಶ್ರೇಣಿಯಲ್ಲಿ ವಾರ್ಷಿಕ ವೇತನ ಬಡ್ತಿಗಳನ್ನು ಪಡೆಯತಕ್ಕದ್ದು. ಹಾಗೂ ಅವರ ಜೇಷ್ಠತೆಯನ್ನು ದ್ವಿತೀಯ ದರ್ಜೆ ಸಹಾಯಕರ ವೃಂದದಲ್ಲಿ ಪ್ರಸ್ತುತ ದ್ವಿತೀಯ ದರ್ಜೆ ಸಹಾಯಕರ ಜೇಷ್ಠತಾ ಪಟ್ಟಿಯಲ್ಲಿ ಅಂತಿಮ ಸಂಖ್ಯೆಯನ್ನು ಹೊಂದತಕ್ಕದ್ದು".

ಆಪಾದಿತ ಸರ್ಕಾರಿ ನೌಕರರಾದ ಶ್ರೀ ಆದಿಕುಮಾರ್, ಇವರ ಅಮಾನತ್ತು ಅವಧಿಯನ್ನು "ಅಮಾನತ್ತಿನಲ್ಲಿಯೇ ಕಳೆದ ಅವಧಿ" (ದಿನಾಂಕ 17.7.2008 ರಿಂದ 23.12.2008ರ ವರೆಗೆ) ಎಂದು ಪರಿಗಣಿಸತಕ್ಕದ್ದು. ಈ ಆದೇಶದ ಪರಿಣಾಮವಾಗಿ ಶ್ರೀ ಆದಿಕುಮಾರ್, ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿ, ಮಂಡ್ಯ ಜಿಲ್ಲೆ ಇಲ್ಲಿ ಖಾಲಿ ಇರುವ ದ್ವಿತೀಯ ದರ್ಜೆ ಸಹಾಯಕರ ಹುದ್ದೆಗೆ ನೇಮಕಾತಿ ಮಾಡಿ ಆದೇಶಿಸಲಾಗಿದೆ.

ಆಪಾದಿತ ಸರ್ಕಾರಿ ನೌಕರನಾದ ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರು ಇವರ ವಿರುದ್ಧದ ಸಾಬೀತಾದ ಆರೋಪಗಳಲ್ಲಿ ಈ ಕೆಳಗೆ ವಿವರಿಸಲಾದ ಹಣಕಾಸಿನ ವಂಚನೆ ಮತ್ತು ಸರ್ಕಾರದ ಹಣದ ದುರುಪಯೋಗ ಸಾಬೀತಾಗಿರುತ್ತದೆ.

| | | |
|---|---|---|
| 1 | ಶ್ರೀಮತಿ ಆರ್.ಜ್ಯೋತಿ, ದ್ವಿತೀಯ ದರ್ಜೆ ಸಹಾಯಕರ ವೇತನಕ್ಕೆ ಸಂಬಂಧಿಸಿದಂತೆ ಸರ್ಕಾರದ ಹಣವನ್ನು ದುರ್ಬಳಕೆ ಮಾಡಿಕೊಂಡಿರುವುದು (ಆರೋಪ; 4ರಲ್ಲಿ ವಿವರಿಸಲಾಗಿದೆ) | ರೂ.2,000-00 |
| 2 | ಶ್ರೀಮತಿ ವೀಣಾ ಕುಲಕರ್ಣೀ, ಗಣತಿದಾರರಿಂದ ಅನಧಿಕೃತವಾಗಿ ವಸೂಲು ಮಾಡಿದ ಹಣ (ಆರೋಪ; 5ರಲ್ಲಿ ವಿವರಿಸಲಾಗಿದೆ) | ರೂ.5,600-00 |
| 3 | ಅದೇ ರೀತಿ ಶ್ರೀಮತಿ ಪಿ.ಮಂಜು, ಗಣತಿದಾರರಿಗೆ ವಂಚಿಸಿ, ಅವರಿಂದ ವಸೂಲು ಮಾಡಿದ ಹಣ | ರೂ.2,500-00 |
| 4 | ಅದೇ ರೀತಿ ಸ್ವತಃ ಕಚೇರಿ ಮುಖ್ಯಸ್ಥರ ಹಾಗೂ ಸಹಾಯಕ ನಿರ್ದೇಶಕರ ತುಟ್ಟಿ ಭತ್ಯೆ ಬಾಕಿ ಹಣವನ್ನು ದುರುಪಯೋಗ ಪಡಿಸಿಕೊಂಡಿರುವುದು (ಆರೋಪ; 11ರಲ್ಲಿ ವಿವರಿಸಲಾಗಿದೆ). | ರೂ. 879-00<br>ರೂ. 505-00 |

| | | |
|---|---|---|
| 5 | ಅದೇ ರೀತಿ ಕಚೇರಿಯ ಸಹಾಯಕ ನಿರ್ದೇಶಕರ ಪ್ರವಾಸದ ಬಿಲ್ ಹಣ ಹಾಗೂ ಅವರದೇ ಹಬ್ಬದ ಮುಂಗಡವನ್ನು ದುರುಪಯೋಗ ಮಾಡಿರುತ್ತಾರೆ. (ವಿವರ ಆರೋಪ: 11ರಲ್ಲದೆ) | ರೂ. 374–00<br>ರೂ. 246–00<br>ರೂ. 164–00<br>ರೂ. 741–00<br>ರೂ.2,000–00 |
| | **ಮೇಲಿನ ಕ್ರಮ ಸಂಖ್ಯೆ(1) ರಿಂದ (5)ರ ವರೆಗೆ ಆಪಾದಿತ ಸರ್ಕಾರಿ ನೌಕರರು ದುರುಪಯೋಗ ಪಡಿಸಿಕೊಂಡ ಒಟ್ಟು ಹಣ:** | **ರೂ.15,009–00** |

ಮೇಲೆ ತಿಳಿಸಲಾದ ಒಟ್ಟು ಹಣವನ್ನು ಶ್ರೀ ಆದಿಕುಮಾರ್ ಅವರಿಂದ ನೇರವಾಗಿ ತಕ್ಷಣ ವಸೂಲು ಮಾಡಿ, ಮೇಲೆ ತಿಳಿಸಲಾದ ಸಿಬ್ಬಂದಿಗಳ ಹೆಸರಿನಲ್ಲಿ ವೈಯಕ್ತಿಕವಾಗಿ ಬ್ಯಾಂಕ್ ಡ್ರಾಫ್ಟ್ ಗಳನ್ನು ಅವರವರ ಹೆಸರಿನಲ್ಲಿ ಅವರವರ ಕಚೇರಿಯ ವಿಳಾಸಕ್ಕೆ ಕಳುಹಿಸಿ, ಈ ನಿರ್ದೇಶನಾಲಯಕ್ಕೆ ಝೆರಾಕ್ಸ್ ಪ್ರತಿಗಳನ್ನು ಸಲ್ಲಿಸುವಂತೆ ಮಂಡ್ಯ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳಿಗೆ ಆದೇಶಿಸಲಾಗಿದೆ, ಹಾಗೂ ಈ ಆದೇಶವನ್ನು ಅನುಷ್ಠಾನಗೊಳಿಸದೆ ಇದ್ದಲ್ಲಿ, ಈ ವೆಚ್ಚವನ್ನು ಭರಿಸುವುದು, ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ವೈಯಕ್ತಿಕ ಜವಾಬ್ದಾರಿಯಾಗಿರುತ್ತದೆ.

**ಹೆಚ್.ಇ. ರಾಜಶೇಖರಪ್ಪ**

ನಿರ್ದೇಶಕರು ಮತ್ತು ಶಿಸ್ತು ಪ್ರಾಧಿಕಾರ.

**ಕೇಸ್ ಸಂಖ್ಯೆ : ಆಸಾಂನಿ/11/ಆಡಳಿತ–2/2007–08**

**ಕಛೇರಿ ಪತ್ರ ಸಂಖ್ಯೆ: ಕಛೇರಿ ಆದೇಶ ಸಂಖ್ಯೆ ಆಡಳಿತ:580:2008–09 ದಿನಾಂಕ 11–02–2009**

**ಶ್ರೀ ವಿ. ಪದ್ಮನಾಭ ಕೆದಿಲಾಯ ಬಿ.ಎ. ಬಿ.ಎಲ್.**

ಸರ್ಕಾರಿ ವಿಚಾರಣಾಧಿಕಾರಿ ಹಾಗೂ ನಿವೃತ್ತ ನ್ಯಾಯಾಧೀಶರ ಮುಂದೆ,

**ನಿರ್ದೇಶಕರು,**
ಕರ್ನಾಟಕ ಸರ್ಕಾರ,
ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ,
ಬಹುಮಹಡಿ ಕಟ್ಟಡ,
ಡಾ. ಅಂಬೇಡ್ಕರ್ ವೀಧಿ, ಬೆಂಗಳೂರು–1 } ಶಿಸ್ತು ಪ್ರಾಧಿಕಾರಿ

**(ಶ್ರೀ ಎಂ.ಎನ್. ಚಾಕರಿ, ಸಹಾಯಕ ನಿರ್ದೇಶಕರು ಮತ್ತು ಮಂಡನಾಧಿಕಾರಿ)**

**ಶ್ರೀ ಆದಿಕುಮಾರ್**
ತಂದೆ ಹೆಸರು: ಹೆಚ್.ವಿ. ರತ್ನೇಶ್ವರಯ್ಯ
ವಯಸ್ಸು: 49 ವರ್ಷಗಳು
ಪ್ರಥಮ ದರ್ಜೆ ಸಹಾಯಕರು.

**ಮನೆ ವಿಳಾಸ:**
23/24 ಟೀಚರ್ಸ್ ಕಾಲೋನಿ,
ವಿ.ವಿ. ಬಡಾವಣೆ,
ಓಂ ಶ್ರೀ ಸರ್ಕಲ್ ಹತ್ತಿರ,
ಹೊಸಕೋಟೆ,
ಬೆಂಗಳೂರು ಗ್ರಾಮಾಂತರ ಜಿಲ್ಲೆ. } ಆಪಾದಿತ ನೌಕರ

**ಶ್ರೀ ಶಿವಾನಂದ ಮೂರ್ತಿ**
**ಆಪಾದಿತ ನೌಕರರ ಸಹಾಯಕರು.**

**ವಿಚಾರಣಾ ವರದಿ**

1. ಮೇಲಿನ ಶಿಸ್ತು ಪ್ರಾಧಿಕಾರಿಯು ದಿನಾಂಕ 11–02–2009 ರಂದು ಕಛೇರಿ ಆದೇಶದ ಸಂಖ್ಯೆ:ಆಡಳಿತ/580/2008–09 ರಲ್ಲಿ ಶ್ರೀ ಆದಿಕುಮಾರ್ ಮೇಲೆ ಹೊರಿಸಿದ ಈ ಕೆಳಗಿನ 12 ದೋಷಾರೋಪಣೆ ಕುರಿತು ವಿಚಾರಣೆ ಮಾಡಿ ವರದಿ ಕೊಡಲು ಕೇಳಿಕೊಂಡಿದ್ದಾರೆ.

**ಆರೋಪ : 1**

2. ಶ್ರೀ ಆದಿಕುಮಾರ್, ಈ ನಿರ್ದೇಶನಾಲಯದ ಪ್ರಥಮ ದರ್ಜೆ ಸಹಾಯಕರಾದ (ಪ್ರಸ್ತುತ ಅಮಾನತ್ತಿನಲ್ಲಿ) ಹಾಗೂ ಆಪಾದಿತ ದುರ್ನಡತೆ (alleged misconduct) ಹೊಂದಿದ ನೀವು ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿಯಲ್ಲಿ ನಿಯೋಜನೆ ಮೇಲೆ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಗೆ ಸಂಬಂಧಿಸಿದಂತೆ, ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು ದಿನಾಂಕ 21.05.2007ರ ಪತ್ರದಲ್ಲಿ ಇನ್ನಿತರ ವಿಷಯಗಳೊಂದಿಗೆ ನಿಮ್ಮ ಅನಧಿಕೃತ ಹೈರುಹಾಜರಾತಿ ಕಾರಣದಿಂದ ಅವರ ಕಛೇರಿ ಸಿಬ್ಬಂದಿಗಳ ಸೇವಾ ವಿಷಯ ನಿರ್ವಹಣೆ, ವೇತನ ಬಿಲ್ಲು ತಯಾರಿಕೆ, ಇತ್ಯಾದಿ ಕರ್ತವ್ಯ ನಿರ್ವಹಣೆಗೆ ತೊಂದರೆಯಾಗುತ್ತಿದ್ದು, ನಿಮ್ಮ ಸೇವೆಯನ್ನು ಅವರ ಕಛೇರಿಯಿಂದ ಹಿಂದಕ್ಕೆ ಪಡೆಯಬೇಕೆಂದು ಕೋರಿದ್ದರು. ಈ ಪ್ರಸ್ತಾವನೆಯನ್ನು ಪರಿಶೀಲಿಸುವ ಹಂತದಲ್ಲಿ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಪ್ರಸ್ತುತ ಇಲಾಖಾ ವಿಚಾರಣೆ ಪ್ರಕರಣದಲ್ಲಿ ಆಪಾದಿತ ದುರ್ನಡತೆ ಹೊಂದಿದ ಸರ್ಕಾರಿ ನೌಕರರಾದ ನಿಮ್ಮ ಸ್ವಂತ ಕೈಬರಹದಿಂದ ಬರೆಯಲಾದ ಪತ್ರದ ಸಂಖ್ಯೆ: ಜಿಸಂಸಂ ಬೆಂಗ್ರಾ/ಆಡಳಿತ/06–07, ದಿನಾಂಕ 13.07.2007 ರಲ್ಲಿ "ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರು, ಈ ಕಛೇರಿಯಲ್ಲಿ ಉತ್ತಮವಾಗಿ ಕಾರ್ಯನಿರ್ವಹಿಸುತ್ತಿರುವುದರಿಂದ ಇವರನ್ನು ವರ್ಗಾವಣೆ ಮಾಡಬಾರದಾಗಿ ತಮ್ಮಲ್ಲಿ ವಿನಂತಿಸಿಕೊಳ್ಳುತ್ತೇನೆ" ಎಂದು ಮರು ಪ್ರಸ್ತಾವನೆ ಸಲ್ಲಿಸಿದ್ದನ್ನು ಕೇಂದ್ರ ಕಛೇರಿಯು ತೀಕ್ಷ್ಣವಾಗಿ ಪ್ರತಿಕ್ರಿಯಿಸಿ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ದ್ವಂದ ಹೇಳಿಕೆ (duel statement) ಕುರಿತು ಅವರ ವಿವರಣೆ ಕೇಳಲಾಗಿ, ಆಪಾದಿತ ಸರ್ಕಾರಿ ನೌಕರರಾದ ನೀವು "ನಿರ್ದೇಶಕರಿಗೆ ಒಂದು ಮನವಿ ಪತ್ರವನ್ನು ತುರ್ತಾಗಿ ಕಳುಹಿಸಬೇಕಾಗಿದೆ" ಎಂದು ಅದು ನಿಮ್ಮ ವೈಯಕ್ತಿಕ ವರ್ಗಾವಣೆ ವಿಷಯವೆಂದು ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳಿಗೆ ಮಾಹಿತಿ ನೀಡದೆ, ಆತುರವಾಗಿ ಸಹಿ ಮಾಡುವಂತೆ ತಿಳಿಸಿದ್ದರಿಂದ "ನಿಮ್ಮ ಮೇಲೆ ನಂಬಿಕೆ ಇಟ್ಟು ಸಹಿ ಮಾಡಿದ್ದಾಗಿ" ಹಾಗೂ ಆಪಾದಿತನ ಸರ್ಕಾರಿ ನೌಕರರಾದ ನೀವು "ಉತ್ತಮವಾಗಿ ಕಾರ್ಯನಿರ್ವಹಿಸುತ್ತಿದ್ದಾರೆಂದು" ಎಂದು ಬರೆದಿದ್ದನ್ನು ಅವರು ಗಮನಿಸಿರಲಿಲ್ಲವೆಂದು ತಿಳಿಸಿರುತ್ತಾರೆ.

3. ಆದ್ದರಿಂದ, ಈ ಪ್ರಕರಣದಲ್ಲಿ ಆಪಾದಿತ ಸರ್ಕಾರಿ ನೌಕರರಾದ ನೀವು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು 1966 ರ ನಿಯಮವನ್ನು ಉಲ್ಲಂಘಿಸಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ. ಹಾಗೂ ಕಛೇರಿ ಮುಖ್ಯಸ್ಥರಿಗೆ/ಇಲಾಖಾ ಮುಖ್ಯಸ್ತರಿಗೆ "ನಂಬಿಕೆ ದ್ರೋಹ" ಎಸಗಿರುತ್ತೀರಿ.

**ಆರೋಪ : 2**

4. ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದ ಆದೇಶದ ಸಂಖ್ಯೆ:ಆಡಳಿತ/661/2007–08, ದಿನಾಂಕ 11.01.2008 ರಲ್ಲಿ ಆಪಾದಿತ ಸರ್ಕಾರಿ ನೌಕರರಾದ ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರಾದ ನಿಮ್ಮನ್ನು ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ರಾಮನಗರ ಜಿಲ್ಲೆ, ಇಲ್ಲಿಗೆ ವರ್ಗಾವಣೆ ಮಾಡಿದ್ದರಿಂದ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಇವರ ಕಛೇರಿ ಆದೇಶದ ಸಂಖ್ಯೆ:ಆಡಳಿತ/51/2007–08 ದಿನಾಂಕ 29.01.2008 ರಲ್ಲಿ ದಿನಾಂಕ 31.01.2008 ರಿಂದ ಅನ್ವಯವಾಗುವಂತೆ ನಿಮ್ಮನ್ನು ಬಿಡುಗಡೆಗೊಳಿಸಿ ಪ್ರಭಾರವನ್ನು ವಹಿಸಿಕೊಳ್ಳುವಂತೆ ಸೂಚಿಸಲಾಗಿತ್ತು. ಆದರೆ ನಿಮ್ಮ ಕೆಲವು ಪತ್ರ ವ್ಯವಹಾರಗಳನ್ನು ಮಾತ್ರ ಅವರಿಗೆ ನೀಡಿ, ಸಂಬಂಧಿಸಿದ ಕಡತಗಳನ್ನಾಗಲಿ, ಸೇವಾ ಪುಸ್ತಕಗಳನ್ನಾಗಲಿ ಮತ್ತು ಕಾರ್ಯನಿರ್ವಹಣಾ ವರದಿಗಳನ್ನಾಗಲಿ ಹಾಗೂ ಇನ್ನಿತರ ಯಾವುದೇ ದಾಖಲಾತಿಗಳನ್ನು ನೀಡದೆ ಇದ್ದುದರಿಂದ ನಿಮಗೆ ಅನೇಕ ಸಾರಿ ಮೌಖಿಕವಾಗಿ ತಿಳಿಸಲಾಗಿತ್ತು ಹಾಗೂ ಅಂತಿಮವಾಗಿ ದಿನಾಂಕ 09.05.2008 ರಂದು ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಇವರು ಹೊರಡಿಸಿದ ಜ್ಞಾಪನಕ್ಕೂ ನೀವು ಯಾವುದೇ ಪ್ರತಿಕ್ರಿಯೆ ನೀಡಿರುವುದಿಲ್ಲ. ಆಪಾದಿತ ಸರ್ಕಾರಿ ನೌಕರರಾದ ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರಾದ ನೀವು ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಆಡಳಿತ ಮತ್ತು ಲೆಕ್ಕ ವಿಭಾಗಕ್ಕೆ ಸಂಬಂಧಿಸಿದ ಎಲ್ಲಾ ದಾಖಲಾತಿಗಳನ್ನು ವಹಿಸತಕ್ಕದ್ದು ನಿಮ್ಮ ಜವಾಬ್ದಾರಿಯಾಗಿದ್ದರೂ ಪ್ರಭಾರವನ್ನು ವಹಿಸದೆ ಆ ವಿಭಾಗಕ್ಕೆ ಸಂಬಂಧಿಸಿದ ಕರ್ತವ್ಯ ನಿರ್ವಹಣೆಯಲ್ಲಿ ಅಡೆತಡೆಯನ್ನುಂಟು ಮಾಡಿ ಅತ್ಯಂತ ಬೇಜವಾಬ್ದಾರಿ ರೀತಿಯಲ್ಲಿ ವರ್ತಿಸಿ ಸರ್ಕಾರಿ ನೌಕರರೊಬ್ಬರಿಗೆ ಸಲ್ಲದ ರೀತಿಯಲ್ಲಿ ವರ್ತಿಸಿದ್ದರಿಂದ ನಿಮಗೆ ನೀಡಲಾದ ಕಪಾಟಿನ ಬೀಗವನ್ನು ದಿನಾಂಕ 23.05.2008 ರಂದು ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು ಮತ್ತು ಸಿಬ್ಬಂದಿಗಳ ಉಪಸ್ಥಿತಿಯಲ್ಲಿ ಬಲವಂತವಾಗಿ ತೆರೆಯಿಸಿ ನೀವು ನಿರ್ವಹಿಸಿದ್ದ/ಬಾಕಿ ಇರಿಸಿಕೊಂಡಿದ್ದ ಪತ್ರ ವ್ಯವಹಾರ, ಸಿಬ್ಬಂದಿಗಳ ಸೇವಾ ಪುಸ್ತಕಗಳು, ಕಡತಗಳನ್ನು ಹಾಗೂ ಇನ್ನಿತರ ದಾಖಲಾತಿಗಳನ್ನು (ಒಟ್ಟು 141) ಆ ಕಛೇರಿ ವಶಕ್ಕೆ ಪಡೆದುಕೊಂಡಿದ್ದರಿಂದ ಈ ಪ್ರಕರಣದಲ್ಲಿ ಆಪಾದಿತ ಸರ್ಕಾರಿ ನೌಕರರಾದ ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರಾದ ನೀವು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು 1966ರ ನಿಯಮ 3 ಅನ್ನು ಸ್ಪಷ್ಟವಾಗಿ ಉಲ್ಲಂಘಿಸಿ ಸರ್ಕಾರಿ ನೌಕರರೊಬ್ಬರಿಗೆ ಸಲ್ಲದ ರೀತಿಯಲ್ಲಿ ವರ್ತಿಸಿರುತ್ತೀರಿ.

**ಆರೋಪ : 3**

5. ಪ್ರಸ್ತುತ ಅಮಾನತ್ತಿನಲ್ಲಿರುವ ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರಾದ ಹಾಗೂ ಆಪಾದಿತ ಸರ್ಕಾರಿ ನೌಕರರಾದ ನೀವು ರಾಮನಗರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿಯಲ್ಲಿ ಅನ್ಯ ಕರ್ತವ್ಯದ ಮೇಲೆ ನಂತರ ದಿನಾಂಕ 31.01.2008 ರಿಂದ ಅದೇ ಕಛೇರಿಗೆ ವರ್ಗಾವಣೆ ಹೊಂದಿ ಕರ್ತವ್ಯಕ್ಕೆ ವರದಿ ಮಾಡಿಕೊಂಡ ನಂತರ ಕೂಡ ನಿಮ್ಮ "ಅನಧಿಕೃತ ಗೈರುಹಾಜರಾಗಿ" ಬೇಜವಾಬ್ದಾರಿತನ, ಕರ್ತವ್ಯಲೋಪ ಮತ್ತು ದುರ್ನಡತೆ ಪ್ರವೃತ್ತಿಯನ್ನು ನಿರಂತರವಾಗಿ ಮುಂದುವರೆಸಿದ್ದರಿಂದ ನಿಮ್ಮ ಮನೆ ವಿಳಾಸಕ್ಕೆ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ರಾಮನಗರ ಜಿಲ್ಲೆ, ಇವರು ನೀಡಲಾದ ಜ್ಞಾಪನದ ಸಂಖ್ಯೆ:ಜಿಸಂಸಂ/ರಾಮ/ಆಡಳಿತ/30/07–08 ದಿನಾಂಕ 15.05.2008 ರಲ್ಲಿ ನಿಮ್ಮ ಅನಧಿಕೃತ ಗೈರುಹಾಜರಾತಿಯಿಂದ ಅವರ ಕಛೇರಿಯ ಸಿಬ್ಬಂದಿಗಳ ಮಾಸಿಕ ವೇತನ ಬಿಲ್ಲು ತಯಾರಿಕೆ ಸಹಿತವಾಗಿ ಆಡಳಿತ ಮತ್ತು ಲೆಕ್ಕ ವಿಭಾಗದ ಕರ್ತವ್ಯ ನಿರ್ವಹಣೆ ಸಂಪೂರ್ಣವಾಗಿ ಸ್ಥಗಿತಗೊಂಡಿರುವುದನ್ನು ವಿವರಿಸಿ, ಕರ್ತವ್ಯಕ್ಕೆ ಹಾಜರಾಗುವಂತೆ ಸೂಚಿಸಲಾಗಿದ್ದರೂ, ನೀವು ಸರ್ಕಾರದ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾತಿಯನ್ನು

ಮುಂದುವರೆಸಿದ್ದರಿಂದ, ಕಛೇರಿ ಕಾರ್ಯಗಳ ನಿರ್ವಹಣೆಗಾಗಿ ನಿಮಗೆ ಕಛೇರಿಯಲ್ಲಿ ನೀಡಲಾದ ಕಪಾಟಿನ ಬೀಗವನ್ನು ದಿನಾಂಕ 15.05.2008 ರಂದು ರಾಮನಗರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು ಮತ್ತು ಆ ಕಛೇರಿಯ ಸಿಬ್ಬಂದಿಗಳ ಉಪಸ್ಥಿತಿಯಲ್ಲಿ ತೆರೆಯಿಸಿ, ನೀವು ನಿರ್ವಹಿಸುತ್ತಿದ್ದ/ಬಾಕಿ ಇರಿಸಿಕೊಂಡಿದ್ದ ಪತ್ರವ್ಯವಹಾರ, ಸೇವಾ ಪುಸ್ತಕಗಳು, ಕಡತಗಳನ್ನು ಮತ್ತು ಇನ್ನಿತರ ದಾಖಲಾತಿಗಳನ್ನು ಆ ಕಛೇರಿ ವಶಕ್ಕೆ ಪಡೆದುಕೊಂಡು, ಆ ವಿಭಾಗದ ಕರ್ತವ್ಯ ನಿರ್ವಹಣೆ ಮುಂದುವರೆಸಲಾಗಿದೆಯಾದರೂ, ಜವಾಬ್ದಾರಿಯುತವಾದ ಪ್ರಥಮ ದರ್ಜೆ ಸಹಾಯಕರಾದ ಹುದ್ದೆಯಲ್ಲಿದ್ದ ಸರ್ಕಾರಿ ನೌಕರರಾದ ನೀವು ಅತ್ಯಂತ ಬೇಜವಾಬ್ದಾರಿ ರೀತಿಯ ದುರ್ನಡತೆ ಪ್ರದರ್ಶಿಸಿ, ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮ 3 ಅನ್ನು ಸಂಪೂರ್ಣವಾಗಿ ಉಲ್ಲಂಘಿಸಿರುತ್ತೀರಿ.

**ಆರೋಪ : 4**

6. ಆಪಾದಿತ ಸರ್ಕಾರಿ ನೌಕರರಾದ (accused Government Official) ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರಾದ ನೀವು ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ರಾಮನಗರ ಜಿಲ್ಲೆ, ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಅದೇ ಕಛೇರಿಯ ದ್ವಿತೀಯ ದರ್ಜೆ ಸಹಾಯಕರಾದ ಶ್ರೀಮತಿ ಆರ್. ಜ್ಯೋತಿ, ಇವರ ಅಕ್ಟೋಬರ್ 2007 ರಿಂದ ಫೆಬ್ರವರಿ 2008ರ ವರೆಗಿನ ವೇತನಕ್ಕೆ ಸಂಬಂಧಿಸಿದಂತೆ ಒಟ್ಟು ರೂ.34,774/– ರ ಬಿಲ್ಲನ್ನು ತಯಾರಿಸಿ, ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳಿಂದ ರುಜು ಪಡೆದುಕೊಂಡು ಖಜಾನೆಯಿಂದ ರೂ.34,774/– ರ ಚೆಕ್ ಸ್ವೀಕೃತಿಯಾದ ನಂತರ, ನಿಯಮಾನುಸಾರ ನಗಧೀಕರಿಸಿ ಸದರಿ ದ್ವಿತೀಯ ದರ್ಜೆ ಸಹಾಯಕರಿಗೆ ರೂ.32,774/– ಗಳನ್ನು ಮಾತ್ರ ವಿತರಿಸಿ, ಆಪಾದಿತ ಸರ್ಕಾರಿ ನೌಕರರಾದ ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರಾದ ನೀವು ರೂ.2,000/– ಗಳನ್ನು ಸರ್ಕಾರದ ಹಣವನ್ನು ಸ್ವಂತಕ್ಕಾಗಿ ದುರ್ಬಳಕೆ ಮಾಡಿಕೊಂಡಿದ್ದಲ್ಲದೆ ವೇತನ ಬಟವಾಡೆ ಪುಸ್ತಕದಲ್ಲಿ ರೂ.34,774/– ಎಂದು ಇದ್ದ ಮೊತ್ತವನ್ನು ರೂ.32,774/– ಎಂದು ತಿದ್ದಿ, ಮೇಲಾಧಿಕಾರಿಗಳಿಗೆ ದಾರಿ ತಪ್ಪಿಸುವ ಹಾಗೂ ಕಛೇರಿ ಮುಖ್ಯಸ್ಥರಿಗೆ ಮತ್ತು ಸರ್ಕಾರಕ್ಕೆ ಮೋಸ ಮಾಡುವ ದುರುದ್ದೇಶದಿಂದ ಹಣಕಾಸಿನ ವಿಷಯಕ್ಕೆ ಸಂಬಂಧಿಸಿದ ದಾಖಲಾತಿಗಳನ್ನು ನಿಮ್ಮ ಸ್ವಹಿತದೃಷ್ಟಿಯಿಂದ ಬದಲಾಯಿಸಿ ದಂಡಾರ್ಹ ದುರ್ನಡತೆ (criminal misconduct) ಪ್ರದರ್ಶಿಸಿ ನಂಬಿಕೆ ದ್ರೋಹ ಎಸಗಿರುತ್ತೀರಿ.

**ಆರೋಪ : 5**

7. ಆಪಾದಿತ ಸರ್ಕಾರಿ ನೌಕರರಾದ (accused Government Official) ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರಾದ ನೀವು ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿಯಲ್ಲಿ ಅನ್ಯ ಕರ್ತವ್ಯದ ಮೇಲೆ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ದಿನಾಂಕ 01.12.2006 ರಿಂದ ಹೊಸಕೋಟೆ ತಾಲ್ಲೂಕು ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಕು: ವೀಣಾ ಕುಲಕರ್ಣಿ, ಗಣತಿದಾರರಿಂದ ರೂ.5,600/– (ರೂ.ಐದು ಸಾವಿರದ ಆರು ನೂರುಗಳು ಮಾತ್ರ) ಗಳನ್ನು ಸರ್ಕಾರದ ಕಛೇರಿಯಲ್ಲಿ ಅನುಷ್ಠಾನಗೊಳಿಸದೆ ಇದ್ದ ಉದ್ದೇಶಕ್ಕಾಗಿ ಪಡೆದುಕೊಂಡಿರುತ್ತೀರೆಂದು, ಸದರಿ ಗಣತಿದಾರರು ದಿನಾಂಕ 14.05.2008 ರಂದು ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಇವರಿಗೆ ನಿಮ್ಮ ವಿರುದ್ಧ ದೂರು ನೀಡಿರುತ್ತಾರೆ.

8. ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿಯಲ್ಲಿ ಪ್ರಥಮ ದರ್ಜೆ ಸಹಾಯಕರಾಗಿ ಜವಾಬ್ದಾರಿಯುತ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ನೀವು ಆಡಳಿತ ಮತ್ತು ಲೆಕ್ಕ ವಿಷಯಕ್ಕೆ ಸಂಬಂಧಿಸಿದಂತೆ ಸಹೋದ್ಯೋಗಿಗಳಿಗೆ ಸೂಕ್ತ ಮಾರ್ಗದರ್ಶನ ನೀಡುವ ಬದಲಾಗಿ ಸರ್ಕಾರದ ಕಛೇರಿಗಳಲ್ಲಿ ಇನ್ನು ಅನುಷ್ಠಾನಗೊಳಿಸದೇ ಉದ್ದೇಶಕ್ಕಾಗಿ ಎಂದು ಸಹೋದ್ಯೋಗಿಗಳಿಗೆ ತಪ್ಪು ಮಾಹಿತಿ ನೀಡಿ, ಅವರಿಂದ ಹಣ ವಸೂಲು ಮಾಡಿ ಸಹೋದ್ಯೋಗಿಗಳಿಗೆ ಮತ್ತು ಕಛೇರಿ ಮುಖ್ಯಸ್ಥರಿಗೆ ನಂಬಿಕೆ ದ್ರೋಹ ಎಸಗಿ, ಗಂಭೀರ ಸ್ವರೂಪದ ದುರ್ನಡತೆ ಎಸಗಿರುತ್ತೀರೆಂದು ಸ್ಪಷ್ಟವಾಗಿ ಕಂಡು ಬರುತ್ತದೆ.

**ಆರೋಪ : 6**

9. ಸದರಿ ಆಪಾದಿತ ಸರ್ಕಾರಿ ನೌಕರರಾದ (accused Government Official) ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರಾದ ನೀವು ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ರಾಮನಗರ ಜಿಲ್ಲೆ, ಇಲ್ಲಿ ನಿಯೋಜನೆ ಮೇಲೆ ಕರ್ತವ್ಯ ನಿರ್ವಹಿಸುತ್ತಿದ್ದಾಗ 4ನೇ ಆರೋಪದಲ್ಲಿ ವಿವರಿಸಲಾದ ಆ ಕ್ರಮದ ವಿಧಾನದಂತೆ ಮತ್ತೊಂದು ವಂಚನೆ ಪ್ರಕರಣವನ್ನು ಎಸಗಿರುವ ಕುರಿತು ಕುಮಾರಿ ಪಿ. ಮಂಜು, ಗಣತಿದಾರರು, ತಾಲ್ಲೂಕು ಕಛೇರಿ, ರಾಮನಗರ ಜಿಲ್ಲೆ, ಇವರು ದಿನಾಂಕ 26.06.2008 ರಂದು ನಿಮ್ಮ ವಿರುದ್ಧ ನೀಡಿದ ದೂರಿನಲ್ಲಿ ವಿವರಿಸುತ್ತಾ, "ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರು, ಇವರು ಡಿ.ಸಿ.ಪಿ.ಎಸ್. ಹಣ ರೂ.2,500/–ಗಳನ್ನು ಪಡೆದು ಖಜಾನೆಗೆ ಸಂದಾಯ ಮಾಡಬೇಕೆಂದು ತಿಳಿಸಿದ್ದು, ಅವರಿಗೆ ನಾನು ನವೆಂಬರ್ 2007ರ ಕೊನೆ ದಿನದಂದು ರೂ.2,500/– ಗಳನ್ನು ಕೊಟ್ಟಿರುವುದಾಗಿ, ಅದಕ್ಕೆ ಅವರು ನನಗೆ ಯಾವುದೇ ರೀತಿಯ ಸ್ವೀಕೃತಿಯನ್ನು ನೀಡಿರುವುದಿಲ್ಲ" ಎಂದು ಗಂಭೀರ ಸ್ವರೂಪದ ಆರೋಪ ಮಾಡಿದ್ದನ್ನು ಪರಿಗಣಿಸಲಾಗಿ ಆಪಾದಿತ ಸರ್ಕಾರಿ ನೌಕರರಾದ ನೀವು ಸರ್ಕಾರಿ ನೌಕರರೊಬ್ಬರಿಗೆ ಸಲ್ಲದ ರೀತಿಯಲ್ಲಿ ವರ್ತಿಸಿ ನಿಮ್ಮ ಸಹೋದ್ಯೋಗಿಗಳಿಗೆ ಹಾಗೂ ಕಛೇರಿ ಮುಖ್ಯಸ್ಥರಿಗೆ ಹಾಗೂ ಸರ್ಕಾರಕ್ಕೆ ನಂಬಿಕೆ ದ್ರೋಹ ಎಸಗಿ ಕರ್ನಾಟಕ ನಾಗರೀಕ ಸೇವೆ (ನಡತೆ) ನಿಯಮಗಳು 1966 ರ ನಿಯಮ 3 ಅನ್ನು ಉಲ್ಲಂಘಿಸಿರುತ್ತೀರಿ.

**ಆರೋಪ : 7**

10. ಸದರಿ ಆಪಾದಿತ ಸರ್ಕಾರಿ ನೌಕರರಾದ ಹಾಗೂ ಪ್ರಸ್ತುತ ಅಮಾನತ್ತಿನಲ್ಲಿರುವ ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರಾದ ನೀವು ದಿನಾಂಕ 11.02.2008 ರಂದು ಸಲ್ಲಿಸಿದ ಮನವಿಯಲ್ಲಿ "ದಿನಾಂಕ 31.01.2008 ರಂದು ಕೇಂದ್ರ ಕಛೇರಿಯಿಂದ ಬಿಡುಗಡೆ ಹೊಂದಿ ಸೇರಿಕೆ ಕಾಲವನ್ನು ಉಪಯೋಗಿಸಿಕೊಂಡು ದಿನಾಂಕ 11.02.2008 ರಂದು ಪೂರ್ವಾಹ್ನ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ರಾಮನಗರ ಜಿಲ್ಲೆ,

ಇಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳುತ್ತಿದ್ದೇನೆ" ಎಂದು ನಮೂದಿಸಿ ವರದಿ ಮಾಡಿಕೊಂಡಿದ್ದು, ನಂತರ ಈ ಕೆಳಗೆ ತಿಳಿಸಲಾದ ದಿನಾಂಕಗಳಂದು ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿರುತ್ತೀರಿ:

1. ದಿನಾಂಕ 01.05.2008 ರಿಂದ 31.05.2008
2. ದಿನಾಂಕ 01.06.2008 ರಿಂದ 31.06.2008

11. ದಿನಾಂಕ 01.07.2008 ರಂದು ನೀವು ಕರ್ತವ್ಯಕ್ಕೆ ನಿಗಧಿತ ಸಮಯಕ್ಕೆ ಹಾಜರಾಗದೆ ಇದ್ದುದ್ದಕ್ಕಾಗಿ ಅಥವಾ ಅನಧಿಕೃತ ಗೈರುಹಾಜರಾಗಿದ್ದುದ್ದನ್ನು ಪರಿಗಣಿಸಿ, ಆ ದಿನದ ನಿಮ್ಮ ಹಾಜರಾತಿಯನ್ನು (X) ಎಂದು ಹಾಜರಾತಿ ಪುಸ್ತಕದಲ್ಲಿ ಗುರುತಿಸಲಾಗಿದ್ದರೂ, ಕಛೇರಿ ಮುಖ್ಯಸ್ಥರ ಅನುಮತಿ ಪಡೆಯದೆ ಅಥವಾ ಅವರಿಂದ ದೃಢೀಕರಿಸದೆ ದಿನಾಂಕ 01.07.2008 ರಂದು (X) ಎಂದು ಗುರುತಿಸಲಾಗಿದ್ದರೂ, ಅದರ ಕೆಳಗೆ ಸಹಿ ಮಾಡಿ ಗಂಭೀರ ಸ್ವರೂಪದ ಲೋಪದೋಷ ಎಸಗಿ ಸರ್ಕಾರಿ ನೌಕರರೊಬ್ಬರಿಗೆ ಸಲ್ಲದ ರೀತಿಯಲ್ಲಿ ವರ್ತಿಸಿರುತ್ತೀರಿ. ದಿನಾಂಕ 08.03.1984 ರಂದು ದ್ವಿತೀಯ ದರ್ಜೆ ಸಹಾಯಕರಾಗಿ ಸರ್ಕಾರಿ ಸೇವೆಗೆ ಸೇರಿದ ನೀವು ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ಮೈಸೂರು, ನಂತರ ಕೇಂದ್ರ ಕಛೇರಿಯಲ್ಲಿ ಹಲವಾರು ವರ್ಷಗಳ ಸೇವೆ ಸಲ್ಲಿಸಿದ್ದರೂ ಹಾಗೂ ಹೊಸದಾಗಿ ಸರ್ಕಾರಿ ಸೇವೆಗೆ ಸೇರಿದ ಸಿಬ್ಬಂದಿಗಳಿಗೆ ಮಾದರಿಯಾಗಿ (exemplary) ವರ್ತಿಸಿ ಅಂತಹವರಿಗೆ ಸರ್ಕಾರದ ಸೇವೆಗೆ ಸಂಬಂಧಿಸಿದಂತೆ ಮಾರ್ಗದರ್ಶನ ನೀಡಬಹುದಾದ ನೀವು 24 ವರ್ಷಗಳ ಸೇವೆಯ ನಂತರವೂ ಅನಧಿಕೃತ ಗೈರುಹಾಜರಾಗುವ ಪ್ರವೃತ್ತಿಯನ್ನು ನಿರಂತರವಾಗಿ ಮುಂದುವರೆಸಿ, ಅತ್ಯಂತ ಬೇಜವಾಬ್ದಾರಿಯ ನಡತೆಯನ್ನು ಪ್ರದರ್ಶಿಸಿ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು 1966 ನಿಯಮ 3ಕ್ಕೆ ವಿರುದ್ಧವಾಗಿ ವರ್ತಿಸಿರುತ್ತೀರಿ.

**ಆರೋಪ : 8**

12. ಪ್ರಸ್ತುತ ಅಮಾನತ್ತಿನಲ್ಲಿರುವ ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರಾದ ನೀವು ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿಯಲ್ಲಿ ಅನ್ಯ ಕರ್ತವ್ಯದ ಮೇಲೆ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಈ ಕೆಳಗೆ ತಿಳಿಸಲಾದ ಅವಧಿಯಲ್ಲಿ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿರುತ್ತೀರಿ:–

1. ದಿನಾಂಕ 14.05.2007 ರಿಂದ 24.05.2007 – ಈ ಬಗ್ಗೆ ನಿಮಗೆ ದಿನಾಂಕ 18.05.2007 ರಂದು ಜ್ಞಾಪನ ನೀಡಲಾಗಿದ್ದರೂ ಅದಕ್ಕೆ ವಿವರಣೆ ಸಲ್ಲಿಸಿರುವುದಿಲ್ಲ. ಸ್ವತ: ನೀವೆ ಕಾರ್ಯನಿರ್ವಾಹಕರಾಗಿದ್ದರಿಂದ ಅನ್ಯ ಕರ್ತವ್ಯದ ಮೇಲಿದ್ದ ನಿಮ್ಮ "ಹಾಜರಾತಿ ಕುರಿತು" ಪ್ರತಿ ತಿಂಗಳು ಕೇಂದ್ರ ಕಛೇರಿಗೆ ವೇತನ ನೀಡುವುದಕ್ಕಾಗಿ ಮಾಹಿತಿ ನೀಡಬೇಕಾಗಿದ್ದರೂ, ಉದ್ದೇಶಪೂರ್ವಕವಾಗಿ ಸಲ್ಲಿಸಿರುವುದಿಲ್ಲ. ಅದೇ ಅವಧಿಯಲ್ಲಿ ನಿಮ್ಮನ್ನು ನಂಜನಗೂಡು "ಪೋಲೀಸ್‌ಠಾಣೆ" ಯಲ್ಲಿ ಇಟ್ಟಿರುವುದಾಗಿ ಮೌಖಿಕವಾಗಿ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿಗೆ ತಿಳಿಸಿದ್ದರಿಂದ ಕರ್ತವ್ಯಕ್ಕೆ ಗೈರುಹಾಜರಾಗಿ ಸರ್ಕಾರಿ ನೌಕರರಿಗೆ ಸಲ್ಲದ ರೀತಿಯಲ್ಲಿ ವರ್ತಿಸಿರುತ್ತೀರಿ.

**ಆರೋಪ : 9**

13. ಆಗಸ್ಟ್ 2007 ರಲ್ಲಿನ ನಿಮ್ಮ ಅನಧಿಕೃತ ಗೈರುಹಾಜರಾತಿಯನ್ನು ಮುಚ್ಚಿ ಹಾಕಲು, ಸ್ವತ: ಜವಾಬ್ದಾರಿಯುತ ಪ್ರಥಮ ದರ್ಜೆ ಸಹಾಯಕ ಹುದ್ದೆಯಲ್ಲಿದ್ದ ನೀವು ನಿಮಗೆ ವಹಿಸಲಾದ ಸರ್ಕಾರದ ದಾಖಲಾತಿಗಳನ್ನು ಸುರಕ್ಷಿತವಾಗಿಡುವ ಬದಲಾಗಿ ಆಗಸ್ಟ್ 2007ರ "ಹಾಜರಾತಿ ಪುಸ್ತಕದ ಭಾಗವನ್ನು" ಹರಿದುಹಾಕಿ ಸರ್ಕಾರಿ ನೌಕರರೊಬ್ಬರಿಗೆ ಸಲ್ಲದ ರೀತಿಯಲ್ಲಿ ವರ್ತಿಸಿರುತ್ತೀರಿ.

**ಆರೋಪ : 10**

14. ಪ್ರಸ್ತುತ ಅಮಾನತ್ತಿನಲ್ಲಿರುವ ಸರ್ಕಾರಿ ನೌಕರರಾದ ನೀವು ದಿನಾಂಕ 14.05.2007 ರಿಂದ 24.05.2007 ರ ವರೆಗೆ ಅನಧಿಕೃತ ಗೈರು ಹಾಜರಾಗಿದ್ದರಿಂದ ನಿಮಗೆ ವಹಿಸಲಾದ ಆಡಳಿತ ಮತ್ತು ಲೆಕ್ಕ ವಿಭಾಗದ ಕರ್ತವ್ಯಗಳ ನಿರ್ವಾಹಕರು/ಸಿಬ್ಬಂದಿಗಳ ವೈಯಕ್ತಿಕ ಸೇವಾ ವಿಷಯದಲ್ಲಿ ತಡೆ ಉಂಟು ಮಾಡಿ, ಅತ್ಯಂತ ಬೇಜವಾಬ್ದಾರಿಯಾಗಿ ವರ್ತಿಸಿರುತ್ತೀರಿ.

**ಆರೋಪ : 11**

15. ಪ್ರಸ್ತುತ ಅಮಾನತ್ತಿನಲ್ಲಿದ್ದ ಸರ್ಕಾರಿ ನೌಕರರಾದ ನೀವು ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಇಲ್ಲಿ ನಿಯೋಜನೆ ಮೇಲೆ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಈ ಕೆಳಗೆ ತಿಳಿಸಲಾದ ಸರ್ಕಾರದ ಹಣವನ್ನು ದುರುಪಯೋಗಪಡಿಸಿಕೊಂಡಿರುತ್ತೀರಿ:–

1) ಶ್ರೀ ಕೆ. ಸಿದ್ದರಾಜು, ಸಹಾಯಕ ನಿರ್ದೇಶಕರು, ಇವರ ಪ್ರವಾಸದ ಬಿಲ್ಲು ಹಣ:

| | | |
|---|---|---|
| (ಅ) ಮೇ 2007 | : | ರೂ. 374.00 |
| (ಆ) ಜೂನ್ 2007 | : | ರೂ. 246.00 |
| (ಇ) ಜುಲೈ 2007 | : | ರೂ. 164.00 |
| (ಈ) ಆಗಸ್ಟ್ 2007 | : | ರೂ. 741.00 |

2) ತಾಲ್ಲೂಕು ಯೋಜನಾ ಘಟಕಕ್ಕೆ ವರ್ಗಾವಣೆ ಆದೇಶದಲ್ಲಿದ್ದ ಶ್ರೀ ಕೆ. ಸಿದ್ದರಾಜು, ಸಹಾಯಕ ನಿರ್ದೇಶಕರು, ಇವರಿಗೆ ಮಂಜೂರಾದ ಹಬ್ಬದ ಮುಂಗಡ ರೂ. 2,000/– ಗಳನ್ನು ಸರ್ಕಾರಕ್ಕೆ ಜಮಾ ಮಾಡುವಂತೆ ಜವಾಬ್ದಾರಿಯುತ ಪ್ರಥಮ ದರ್ಜೆ ಸಹಾಯಕರಾದ ಹಾಗೂ ಆಡಳಿತ ಮತ್ತು ಲೆಕ್ಕ ವಿಭಾಗದ ಕಾರ್ಯನಿರ್ವಾಹಕರಾದ ನಿಮಗೆ ಅವರು ನೀಡಿದ್ದನ್ನು ಸರ್ಕಾರಕ್ಕೆ ಜಮಾ ಮಾಡದೆ, ಈ ಹಣವನ್ನು ದುರುಪಯೋಗ ಪಡಿಸಿಕೊಂಡಿರುತ್ತೀರಿ.

3) ಈ ನಿರ್ದೇಶನಾಲಯದ ಆದೇಶದ ದಿನಾಂಕ 29.06.2006 ರನ್ವಯ ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿಯಲ್ಲಿ ನಿಯೋಜನೆ ಮೇಲೆ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಸರ್ಕಾರದ ಆದೇಶದ ಸಂಖ್ಯೆ: ಪಿಡಿ/25/ಎಸ್‌ಆರ್‌ಪಿ/2006, ದಿನಾಂಕ 27.07.2006ರಲ್ಲಿ ಮಂಜೂರಾದ ತುಟ್ಟಿಭತ್ಯೆ ಬಾಕಿಯನ್ನು ಈ ಕೆಳಗೆ ತಿಳಿಸಲಾದ ಅಧಿಕಾರಿಗಳಿಗೆ ವಿತರಿಸದೇ ಸರ್ಕಾರದ ಹಣವನ್ನು ದುರುಪಯೋಗ ಪಡಿಸಿಕೊಂಡಿರುತ್ತೀರಿ.

1. ಸಹಾಯಕ ನಿರ್ದೇಶಕರಾಗಿದ್ದ ಶ್ರೀ ಕೆ. ಸಿದ್ದರಾಜು : ರೂ. 879.00
2. ಸ್ವತ: ಕಛೇರಿ ಮುಖ್ಯಸ್ಥರಾಗಿದ್ದ ಶ್ರೀ ಬಿ. ಶ್ರೀನಿವಾಸಾಚಾರ್, ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ಇವರ ನವೆಂಬರ್ ತಿಂಗಳಿನ ವೇತನ ವ್ಯತ್ಯಾಸ (ಈ ಹಣವನ್ನು ದುರುಪಯೋಗ ಪಡಿಸಿಕೊಳ್ಳುವ ಉದ್ದೇಶದಿಂದ ನೀವು ಸ್ವತ: ತಯಾರಿಸಿದ ಬಿಲ್ಲಿನಲ್ಲಿ ಯಾವ ವಿಷಯ ಎಂದು ನಮೂದಿಸಿರುವುದಿಲ್ಲ). : ರೂ. 505.00

**ಆರೋಪ : 12**

16. ಪ್ರಸ್ತುತ ಅಮಾನತ್ತಿನಲ್ಲಿರುವ ಪ್ರಥಮ ದರ್ಜೆ ಸಹಾಯಕರಾದ ಶ್ರೀ ಆದಿಕುಮಾರ್, ಆದ ನೀವು 2004ನೇ ಸಾಲಿನಲ್ಲಿ ಕೇಂದ್ರ ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಶ್ರೀಮತಿ ಗಿರಿಯಮ್ಮ, ಗಣತಿದಾರರಿಗೆ ಸಂಬಂಧಿಸಿದ ಕಡತವನ್ನು ಪರಿಶೀಲಿಸುವಲ್ಲಿ ಎಸಗಿದ್ದ ಲೋಪದೋಷಗಳ ಕುರಿತು ನಿಮಗೆ ನೀಡಲಾದ ಜ್ಞಾಪನದ ದಿನಾಂಕ 05.10.2007ಕ್ಕೆ ಸಂಬಂಧಿಸಿದಂತೆ, ದಿನಾಂಕ 29.10.2007 ರಂದು ನೀಡಿದ ನಿಮ್ಮ ವಿವರಣೆಯಲ್ಲಿ ನೀವು ಯಾವುದೇ ಲೋಪದೋಷಗಳನ್ನು ಎಸಗದೆ ಇದ್ದಾಗಲೂ, ನಿಮ್ಮ ಮೇಲಿನ "ವೈಯಕ್ತಿಕ ದ್ವೇಷ" ಮತ್ತು "ಸೇಡಿನಿಂದ" ಆ ಜ್ಞಾಪನವನ್ನು ನಿಮಗೆ ನೀಡುವಂತೆ ಮಾಡಿದ್ದರಿಂದ ನಿಮಗೆ "ಮಾನಸಿಕ ಹಿಂಸೆ" ಯಾಗಿದ್ದು ನಿಮ್ಮ ಕುಟುಂಬದವರೆಲ್ಲರೊಂದಿಗೆ ಆತ್ಮಹತ್ಯೆ ಮಾಡಿಕೊಳ್ಳುತ್ತೇವೆಂದು ಹಾಗೂ ಸದರಿ ಅವರಿಗೆ "ಮಾನಸಿಕ ಹಿಂಸೆ" ನೀಡುತ್ತಿರುವವರೇ ನಿಮ್ಮ ಆತ್ಮಹತ್ಯೆಗೆ ಕಾರಣರಾಗುತ್ತಿರೆಂದು ನಿಮಗೆ ಜ್ಞಾಪನ ನೀಡಿದ ಇಲಾಖಾ ಮುಖ್ಯಸ್ಥರಿಗೆ ಹೆದರಿಸಿರುವ (block mail) ನಿಮ್ಮ ವರ್ತನೆಯು ಸರ್ಕಾರಿ ನೌಕರರೊಬ್ಬನಿಗೆ ಸಲ್ಲದ ರೀತಿಯಲ್ಲಿರುತ್ತದೆ.

17. ಕೇಂದ್ರ ಕಛೇರಿಯಿಂದ ನಿಮ್ಮನ್ನು ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿಗೆ ನಿಯೋಜಿಸಿದ/ ವರ್ಗಾವಣೆ ನಂತರವೂ ನಿಮ್ಮ ಅನಧಿಕೃತ ಹೈರುಹಾಜರಾತಿ, ಕರ್ತವ್ಯಲೋಪ, ದುರ್ನಡತೆ, ಸರ್ಕಾರದ ಹಣದ ದುರುಪಯೋಗ ನಿರಂತರವಾಗಿ ಆ ಕಛೇರಿಯಲ್ಲಿಯೂ ಮುಂದುವರೆದಿದ್ದರಿಂದ ನಿಮಗೆ ಹಲವಾರು ಜ್ಞಾಪನಗಳನ್ನು ನೀಡುವ, ನಿಮ್ಮನ್ನು ಸೇವೆಯಿಂದ ಅಮಾನತ್ತುಗೊಳಿಸುವಂತಹ ಪರಿಸ್ಥಿತಿಗೆ ಸ್ವತ: ನೀವೇ ಕಾರಣರಾಗಿದ್ದರಿಂದ, ಈ ಎಲ್ಲಾ ಕಾರಣಗಳಿಂದಾಗಿ "ಮಾನಸಿಕ ಹಿಂಸೆ" ಎಂದು ಪರಿಗಣಿಸಿಕೊಂಡು "ಆತ್ಮಹತ್ಯೆ" ಮಾಡಿಕೊಂಡಲ್ಲಿ ಅದು ನಿಮ್ಮ "Congnizable Offence" ಎಂದು (ತಕ್ಷಣ ಪೋಲೀಸಿನವರು ದಸ್ತಗಿರಿ ಮಾಡಬಹುದಾದ ಅಪರಾಧ) ಪರಿಗಣಿಸುವಂತೆ ಸೂಚಿಸಲಾಗಿತ್ತು ಹಾಗೂ ಶ್ರೀಮತಿ ಗಿರಿಯಮ್ಮ, ಗಣತಿದಾರರು, ಇವರ ಖಾಯಂಪೂರ್ವ ಅವಧಿಯನ್ನು ಘೋಷಿಸುವ ಪ್ರಕರಣಕ್ಕೆ ಸಂಬಂಧಿಸಿದಂತೆ ನಿಮಗೆ ನೀಡಲಾದ ಜ್ಞಾಪನಕ್ಕೆ ವಿವರಣೆ ನೀಡುವಂತೆ ಸೂಚಿಸಲಾಗಿದ್ದರೂ, ನಿಮ್ಮ ವಿವರಣೆ ನೀಡಿರುವುದಿಲ್ಲ.

18. ಆಪಾದಿತ ಸರ್ಕಾರಿ ನೌಕರರಾದ ಶ್ರೀ ಆದಿಕುಮಾರ್, ಪ್ರಥಮ ದರ್ಜೆ ಸಹಾಯಕರು (ಪ್ರಸ್ತುತ ಅಮಾನತ್ತಿನಲ್ಲಿ) ಆದ ನಿಮ್ಮ ವಿರುದ್ದದ ಮೇಲೆ ತಿಳಿಸಲಾದ ಎಲ್ಲಾ ಆರೋಪಗಳಿಗೆ ಸಂಬಂಧಿಸಿದಂತೆ, ವಿಶೇಷವಾಗಿ ರಾಮನಗರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿಯಲ್ಲಿ ಕುಮಾರಿ ಆರ್. ಜ್ಯೋತಿ, ದ್ವಿತೀಯ ದರ್ಜೆ ಸಹಾಯಕರಿಗೆ ವೇತನ ನೀಡುವ ವಿಷಯದಲ್ಲಿ ದಾಖಲಾತಿಗಳನ್ನು ನಿಮ್ಮ ಸ್ವಹಿತದೃಷ್ಟಿಯಿಂದ ದುರುದ್ದೇಶಪೂರಕವಾಗಿ ಬದಲಾಯಿಸಿ (tampering of government records) ಗಂಭೀರ ಸ್ವರೂಪದ ದುರ್ನಡತೆ ಪ್ರದರ್ಶಿಸಿ (Criminal misconduct) ಸರ್ಕಾರಕ್ಕೆ ನಂಬಿಕೆ ದ್ರೋಹ ಎಸಗಿರುವುದರಿಂದ ಹಾಗೂ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ರಾಮನಗರ ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲೆ, ಇಲ್ಲಿ ನಿರಂತರವಾಗಿ ಅಧಿಕೃತ ಗೈರುಹಾಜರಾಗಿ, ಕರ್ತವ್ಯಲೋಪ, ಬೇಜವಾಬ್ದಾರಿತನ ಮತ್ತು ದುರ್ನಡತೆ ಪ್ರದರ್ಶಿಸಿ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು 1966ರ ನಿಯಮ 3 ಅನ್ನು ಉಲ್ಲಂಘಿಸಿದ್ದರಿಂದ ನಿಮ್ಮ ವಿರುದ್ಧ ಇಲಾಖಾ ವಿಚಾರಣೆ ಏರ್ಪಡಿಸಲು ಉದ್ದೇಶಿಸಲಾಗಿದೆ.

**19**. ಶ್ರೀಯುತ ಎಂ.ಎನ್. ಚಾಕರಿ ರವರು ಶಿಸ್ತು ಪ್ರಾಧಿಕಾರಿ ಪರವಾಗಿ 10 ಸಾಕ್ಷಿಗಳನ್ನು ನನ್ನ ಮುಂದೆ ವಿಚಾರಿಸಿದರು. ನಿ.ಪಿ.1 ರಿಂದ ನಿ.ಪಿ.30 ದಾಖಲೆಗಳ ಮೇಲೆ ಅವಲಂಬಿಸಿದರು. ಆಪಾದಿತ ನೌಕರ ನಿ.ಡಿ.1 ಮತ್ತು ಡಿ2 ಹಾಗೂ ತನ್ನ ಲಿಖಿತ ವಾದದ ಮೇಲೆ ಅವಲಂಬಿಸಿದರು. ತಾನು ಸಾಕ್ಷಿಯಾಗಿ ಪ್ರತ್ಯೇಕ ಹೇಳಿಕೆ ನೀಡಿಲ್ಲ. ನನ್ನ ಮುಂದೆ ಹಾಜರುಪಡಿಸಿದ ಸಾಕ್ಷಿ ಹೇಳಿಕೆ ಹಾಗೂ ದಾಖಲೆಗಳ ಮೇಲೆ ಆಧರಿಸಿ ನಾನು ಕೇಳಿದ 21 ಪ್ರಶ್ನೆಗಳಿಗೆ ದಿನಾಂಕ 04–01–2010 ರಂದು ಉತ್ತರ ನೀಡಿದ್ದಾರೆ.

**20. ಈ ಇಲಾಖಾ ವಿಚಾರಣೆಯಲ್ಲಿ ಉದ್ಭವಿಸುವ ಮುಖ್ಯ ಅಂಶಗಳು.**

ಆಪಾದಿತರು ದಿ. 13–07–2007 ರಂದು ನಿ.ಪಿ.4 ಕ್ಕೆ ಶ್ರೀ ಸಿದ್ದರಾಜು, ಸಹಾಯಕ ಸಾಂಖ್ಯಿಕ ಅಧಿಕಾರಿ ಮೇಲಾಧಿಕಾರಿಗೆ ಸರಿಯಾಗಿ ತಿಳಿಸದೆ ಸಹಿ ತೆಗೆದುಕೊಂಡಿದ್ದಾರೆಯೇ?

ಆಪಾದಿತರು ತನ್ನ ಕೆಲಸದ ಪ್ರಭಾರೆಯನ್ನು ವರ್ಗವಾದ ಮೇಲೆ ಕೊಡಲಿಲ್ಲವೇ ?

ಆಪಾದಿತರು ದಿ. 01–12–2006 ರಂದು ರೂ. 5600/– ಗಳನ್ನು ಶ್ರೀಮತಿ ವೀಣಾ ಕುಲಕರ್ಣಿ ಯವರಿಂದ ಅಕ್ರಮವಾಗಿ ತೆಗೆದುಕೊಂಡಿದ್ದಾರೆಯೇ ?

ಆಪಾದಿತರು ರೂ. 2000/– ಗಳ ಸರ್ಕಾರಿ ಹಣ ದುರುಪಯೋಗ ಮಾಡಿದ್ದಾರೆಯೇ ?

ಆಪಾದಿತರು ತನ್ನ ಕರ್ತವ್ಯಕ್ಕೆ ಗೈರು ಹಾಜರಾದರೇ ಮತ್ತು ಬೇಜವಾಬ್ದಾರಿಯಿಂದ ವರ್ತಿಸಿದರೇ ?

ಆಪಾದಿತರು ದಿ. 01–05–2008 ರಿಂದ 30–06–2008 ರ ವರೆಗೆ ಅನಧಿಕೃತ ಗೈರು ಹಾಜರಾಗಿದ್ದಾರೆಯೇ?

ಆಪಾದಿತರು ಶ್ರೀಮತಿ ಪಿ. ಮಂಜು ಅವರಿಂದ ರೂ. 2500/– ಗಳನ್ನು ಅನಧೀಕೃತವಾಗಿ ಪಡೆದಿದ್ದಾರೆಯೇ?

ದಿನಾಂಕ 14–05–2007 ರಿಂದ 24–05–2007 ರ ವರೆಗೆ ಆಪಾದಿತರು ಗೈರು ಹಾಜರಾಗಿದ್ದಾರೆಯೇ ?

ಆಪಾದಿತರು 2007ರ ಆಗಸ್ಟ್ ತಿಂಗಳ ಹಾಜರಾತಿ ಪುಸ್ತಕದ ಹಾಳೆಯನ್ನು ಹರಿದು ಹಾಕಿದ್ದಾರೆಯೇ?

ಆಪಾದಿತರು ದಿ. 14–05–2007 ರಿಂದ 24–05–2007ರ ವರೆಗೆ ಗೈರು ಹಾಜರಾಗಿ ತನ್ನ ಕಛೇರಿ ಕರ್ತವ್ಯ ಪಾಲಿಸುವುದರಲ್ಲಿ ಬೇಜವಾಬ್ದಾರಿತನಯಿಂದ ವರ್ತಿಸಿದ್ದಾರೆಯೇ?

ಆಪಾದಿತರು 11ನೇ ಆರೋಪದ 1ನೇ ಭಾಗದಲ್ಲಿದ್ದಂತೆ ರೂ.374/–, ರೂ. 246/–, ರೂ. 164/–, ರೂ. 741/–, 2ನೇ ಭಾಗದಲ್ಲಿದಂತೆ ರೂ. 2,000/– ಗಳು ಮತ್ತು 3ನೇ ಭಾಗದಲ್ಲಿದಂತೆ ರೂ. 879/–, ರೂ. 505/– ಗಳ ಮೊತ್ತವನ್ನು ಸಂಬಂಧಪಟ್ಟ ತನ್ನ ಸಹೋದ್ಯೋಗಿ ಸರ್ಕಾರಿ ನೌಕರರಿಗೆ ನೀಡದೆ ದುರುಪಯೋಗ ಮಾಡಿದ್ದಾರೆಯೇ ?

ಆಪಾದಿತರು ಕಛೇರಿಯ ನಿರ್ದೇಶಕರಿಗೆ ತನ್ನ ಕಾಗದದಲ್ಲಿ ತಾನು ಆತ್ಮಹತ್ಯೆ ಮಾಡಿಕೊಳ್ಳುವೆನೆಂದು ಬರೆದು ಹೆದರಿಸಿದ್ದಾರೆಯೇ?

**21. ಉತ್ತರ**

1 ರಿಂದ 8 ಹಾಗೂ 10 ರಿಂದ 12 ಮುಖ್ಯಾಂಶಗಳಿಗೆ ನನ್ನ ಉತ್ತರ ಸಕಾರಾತ್ಮಕವಾಗಿದೆ. 9ನೇ ಆರೋಪಕ್ಕೆ ನಕಾರಾತ್ಮಕ ಅಭಿಪ್ರಾಯ ವ್ಯಕ್ತಪಡಿಸುತ್ತೇನೆ.

**ಕಾರಣಗಳು :**

**22. 1ನೇ ಸಾಕ್ಷಿ ಬಿ. ಶ್ರೀನಿವಾಸಾಚಾರ್** ದಿನಾಂಕ 30–05–2009 ರಂದು ಪ್ರಮಾಣ ಮಾಡಿ ನನ್ನ ಮುಂದೆ ಆಪಾದಿತ ನೌಕರರು 2006 ಜುಲೈ ಮೊದಲನೇ ವಾರದಲ್ಲಿ ಅವರ ಬೆಂಗಳೂರು ಗ್ರಾಮಾಂತರ ಜಿಲ್ಲೆ ಕಛೇರಿಯಲ್ಲಿ ಪ್ರಥಮ ದರ್ಜೆ ಸಹಾಯಕರಾಗಿ ಕಾರ್ಯ ನಿರ್ವಹಿಸಿದರು ಮತ್ತು ಸಿಬ್ಬಂದಿಯ ವೇತನ ಬಿಲ್ಲು ಮತ್ತು ಇತರ ಆಡಳಿತಾತ್ಮಕ ಕೆಲಸವನ್ನು ಅವರಿಗೆ ವಹಿಸಿಕೊಟ್ಟೆ, ಆಪಾದಿತರು ದಿ. 14–5–2007 ರಿಂದ 24–5–2007 ರ ತನಕ ಗೈರುಹಾಜರಾಗಿದ್ದರು. ಆ ಬಗ್ಗೆ ನಾನು ನಿರ್ದೇಶಕರಿಗೆ ನಿ.ಪಿ.1 ರಂತೆ ವರದಿ ನೀಡಿದೆ ಮತ್ತು ಬೇರೆಯವರನ್ನು ಆಪಾದಿತರ ಬದಲಿಗೆ ನೇಮಕಮಾಡಲು ಕೇಳಿಕೊಂಡೆ, ದಿ. 18–5–2007 ರಂದು ಆಪಾದಿತರಿಗೆ ನಿ.ಪಿ.2 ರಂತೆ ಜ್ಞಾಪನ ನೀಡಿದ್ದೆ. ಆಪಾದಿತರು 25–5–2007 ರಂದು ಕಛೇರಿಗೆ ಹಾಜರಾದರು. ಆಪಾದಿತರ ಗೈರು ಹಾಜರಿಯಲ್ಲಿ ನೌಕರರ ವೇತನ ಬಿಲ್ಲುಗಳನ್ನು ತಯಾರು ಮಾಡಲಾಗಲಿಲ್ಲ. ಶ್ರೀ ಚಂದ್ರಶೇಖರ್, ಸಾಂಖ್ಯಿಕ ನಿರೀಕ್ಷಕರು ನಿವೃತ್ತಿ ಹೊಂದಿದ್ದರು. ಅವರ ನಿವೃತ್ತಿ ವೇತನಕ್ಕೆ ಸಂಬಂಧಪಟ್ಟ ಕ್ರಮ ಜರುಗಿಸಲಾಗಲಿಲ್ಲ ಹಾಗೂ ಆಪಾದಿತರಿಗೆ ರಜೆ ಅರ್ಜಿ ಕೊಡಲು ಕೇಳಿಕೊಂಡಿದ್ದೆ. ಸಹಾಯಕ ನಿರ್ದೇಶಕರ ತುಟ್ಟಿ ಭತ್ಯೆ ಬಿಲ್ಲುಗಳನ್ನು ತಯಾರಿಸಿ ಆಪಾದಿತರು ಖಜಾನೆಗೆ ಕಳುಹಿಸಿದ್ದರು. ಖಜಾನೆಯಿಂದ ಹಣ ಬಂದಿರುವುದಿಲ್ಲ ಹಾಗೂ ಈ ತನಕ ತನ್ನ ತುಟ್ಟಿ ಭತ್ಯೆ ಬಂದಿರಲಿಲ್ಲ. ಆದರೆ ಖಜಾನೆಯಲ್ಲಿ ಅವರ ತುಟ್ಟಿ ಭತ್ಯೆ ಬಿಲ್ಲು ಕಾಣೆಯಾಗಿದೆ ಎಂದು ಸಮೂಹ 'ಡಿ' ನೌಕರ ಬಾಲಕೃಷ್ಣ ತಿಳಿಸಿದರು. ಬಸವ ಜಯಂತಿಗೆ ಶ್ರೀ ಸಿದ್ದರಾಜು ಸ.ನಿ. ಇವರಿಗೆ ರೂ. 2,000/– ಗಳನ್ನು ಹಬ್ಬದ ಮುಂಗಡ ಮಂಜೂರು ಮಾಡಿದ್ದೆ. ಅವರು ಆ ಹಣವನ್ನು ಪಡೆದಿದ್ದರು ಮತ್ತು ಆ ಹಣವನ್ನು ಕಟ್ಟಲು ಆಪಾದಿತರ ಕೈಗೆ ಕೊಟ್ಟಿದ್ದರು ಮತ್ತು ಆ ಹಣ ರೂ. 2,000/– ಗಳನ್ನು ತಾನು ಗ್ರಾಮಾಂತರ ಜಿಲ್ಲೆಯಲ್ಲಿ ಕಾರ್ಯನಿರ್ವಹಿಸುವ ಅವಧಿಯಲ್ಲಿ ಖಜಾನೆಗೆ ಜಮೆ ಆಗಿರುವುದಿಲ್ಲ. ನಿ.ಪಿ.4 ದಿ. 13–7–2007 ರಂದು ಆಪಾದಿತರು ಈ ಸಾಕ್ಷಿ ಹೆಸರಲ್ಲಿ ಬರೆದ ಪತ್ರ ಅದಕ್ಕೆ ನಾನು ಆ ದಿನ ಗ್ರಾಮ ಲೆಕ್ಕಿಗರ ತರಬೇತಿಗೆ ಹೋಗುವ ಆತುರದಲ್ಲಿದ್ದಾಗ ಬೆಳಿಗ್ಗೆ 9–45ಕ್ಕೆ ಬೇರೆ 2–3 ಪತ್ರಗಳೊಂದಿಗೆ ತನ್ನ ಸಹಿಯನ್ನು ಆಪಾದಿತರು ತೆಗೆದುಕೊಂಡರು. ಆದರೆ ನಾನು ಆ ಪತ್ರದ ವಿಷಯ ಓದಿರಲಿಲ್ಲ. ನಾನು ಆಮೇಲೆ ನಿರ್ದೇಶಕರಿಗೆ ಈ ವಿಷಯ ನಿ.ಪಿ.5 ನ್ನು ಅವರ ಕಛೇರಿಗೆ ಹೋಗಿ ಬರೆದುಕೊಟ್ಟೆ. ಆದ್ದರಿಂದ ಅದರಲ್ಲಿ ತನ್ನ ಕಛೇರಿಯ ರವಾನೆ ಸಂಖ್ಯೆ ಇರುವುದಿಲ್ಲ. ದಿ. 15–7–2009 ರಂದು ಪಾಟೀ ಸವಾಲು ಸಮಯ ಇದೇ ಸಾಕ್ಷಿ ತನ್ನ ಹೇಳಿಕೆಯಲ್ಲಿ ಕಛೇರಿ ಕಪಾಟುಗಳ ದ್ವಿತೀಯ ಕೀಲಿಗಳನ್ನು ಕಛೇರಿಯ ಅಧೀಕ್ಷಕರು ಅಥವಾ ಕಛೇರಿ ಮುಖ್ಯಸ್ಥರು ಇಟ್ಟುಕೊಳ್ಳುತ್ತಿರಲಿಲ್ಲ. ಆಪಾದಿತರು ಗೈರು ಹಾಜರಿ ಅವಧಿಗೆ ರಜೆ ಅರ್ಜಿ ಸಲ್ಲಿಸಿಲ್ಲ. ನಾಯಿ ಕಚ್ಚಿದೆ ವೈದ್ಯರ ಪ್ರಮಾಣ ಪತ್ರ ತಂದುಕೊಡುತ್ತೇನೆಂದು ಹೇಳುತ್ತಾ ಬಂದರು ಮತ್ತು ಮುಂದುವರಿಸಿ 2007 ಮೇ ತಿಂಗಳ ವೇತನ ಖಜಾನೆಯಿಂದ ತೆಗೆದುಕೊಳ್ಳಲಾದ ಮತ್ತು ಆ ಬಿಲ್ಲನ್ನು ಈ ಆಪಾದಿತರೇ ತಯಾರು ಮಾಡಿದ್ದರು ಎಂದು ಒಪ್ಪಿಕೊಂಡರು. ತುಟ್ಟಿ ಭತ್ಯೆ ಬಿಲ್ಲು ಖಜಾನೆಯಲ್ಲಿ ಕಾಣೆಯಾಗಿರುವುದು ತಿಳಿದ ಮೇಲೆ ಖಜಾನೆಗೆ ತಾನು ಪತ್ರ ಬರೆದಿಲ್ಲ. ಶ್ರೀ ಸಿದ್ದರಾಜು ರವರು ರೂ. 2000/– ಗಳ ಮುಂಗಡ ಹಣ ಪಡೆದಿರುವುದಕ್ಕೆ ಅಕ್ವಿಟೆನ್ಸ್ ರಿಜಿಸ್ಟರ್‌ನಲ್ಲಿ ಸಹಿ ಮಾಡಿದ್ದಾರೆ. ನಿ.ಪಿ.4 ಕ್ಕೆ ತಾನು ಪೂರ್ಣ ಓದಿ ಸಹಿ ಮಾಡಿದ್ದೇನೆ ಎಂಬ ಸೂಚನೆಯನ್ನು ಈ ಸಾಕ್ಷಿ ಅಲ್ಲಗಳೆದಿದ್ದಾರೆ. ಆಪಾದಿತರ 2007 ಮೇ ತಿಂಗಳ ವೇತನವನ್ನು ನಾನು ಖಜಾನೆಯಿಂದ ತೆಗೆಯಲಿಲ್ಲವೆಂದು ಮರು ಸವಾಲಿನಲ್ಲಿ ಹೇಳಿಕೊಂಡಿದ್ದಾರೆ.

**23. ಸರ್ಕಾರಿ ಸಾಕ್ಷಿ ಸಂಖ್ಯೆ 2 ಶ್ರೀಮತಿ ಡಿ.ಆರ್. ಸವಿತಾ** ದಿ. 30–05–2009 ರಂದು ಆಪಾದಿತರು ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಕೆಲಸ ಮಾಡುತ್ತಿದ್ದಾಗ ತಾನು ಆ ಕಛೇರಿಯಲ್ಲಿ ದ್ವಿತೀಯ ದರ್ಜೆ ಸಹಾಯಕಳಾಗಿದ್ದು ಪ್ರವಾಸ ಭತ್ಯೆ ಬಿಲ್ಲು, ರವಾನೆ, ಸ್ವೀಕೃತಿ ಹಾಗೂ ಲೇಖನ ಸಾಮಗ್ರಿಗಳ ದಾಸ್ತಾನು ನೋಡಿಕೊಳ್ಳುತ್ತಿದ್ದೆನು. ಆಪಾದಿತರು ಬಿಲ್ಲು ತಯಾರು ಮಾಡಿ ಖಜಾನೆಗೆ ಕಳುಹಿಸಿದ ಮೇಲೆ ಅಕ್ವಿಟೆನ್ಸ್ ರಿಜಿಸ್ಟರ್ ಇತ್ಯಾದಿಗಳನ್ನು ಆಪಾದಿತರಿಗೆ ಕೊಡುತ್ತಿದ್ದೆ. ಆಪಾದಿತರು ನಗದು ಪುಸ್ತಕ ಚೆಕ್ ರಿಜಿಸ್ಟರ್‌ಗಳನ್ನು ಇಟ್ಟುಕೊಳ್ಳುತ್ತಿದ್ದರು ಮತ್ತು ನಗದನ್ನು ಆಪಾದಿತರೇ ವಿತರಣೆ ಮಾಡುತ್ತಿದ್ದರು. ಹಾಜರಾತಿ ಪುಸ್ತಕವನ್ನು ಆಪಾದಿತರೇ ನೋಡಿಕೊಳ್ಳುತ್ತಿದ್ದರು. ಈ ಸಾಕ್ಷಿಯು ದಿ. 29–06–2009 ರಂದು ಪಾಟೀ ಸವಾಲಿಗೆ ಉತ್ತರಿಸುತ್ತಾ ಕೆಲಸದ ಹಂಚಿಕೆ ಪಟ್ಟಿ ಆ ಕಛೇರಿಯಲ್ಲಿ ನಾನು ನೋಡಿಲ್ಲ. ಆಪಾದಿತರು ಗೈರು ಹಾಜರಿಯಲ್ಲಿದ್ದಾಗ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು ಹಾಜರಾತಿ ಪುಸ್ತಕವನ್ನು ಇಟ್ಟುಕೊಳ್ಳುತ್ತಿದ್ದರೆಂದು ಹೇಳಿದರು.

**24. ಸರ್ಕಾರಿ ಸಾಕ್ಷಿ ಸಂಖ್ಯೆ 3 ಕೆ. ಸಿದ್ದರಾಜು** ತಾನು ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಸಹಾಯಕ ನಿರ್ದೇಶಕನಾಗಿ ದಿ. 18–.7–2006 ರಿಂದ 31–08–2007 ರ ವರೆಗೆ ಕೆಲಸ ಮಾಡುತ್ತಿದ್ದೆ. ಆಪಾದಿತರು ಪ್ರಥಮ ದರ್ಜೆ ಸಹಾಯಕರು ಆಗಿದ್ದರು. ತಾನು ಆ ಹುದ್ದೆಯಿಂದ ವರ್ಗಾವಣೆಯಾಗುವ ಸಮಯದಲ್ಲಿ ಎಲ್.ಪಿ.ಸಿ. ತೆಗೆದುಕೊಳ್ಳುವ ಮುನ್ನ ರೂ. 2000/– ಗಳನ್ನು ಬಸವ ಜಯಂತಿಗೆ ಹಬ್ಬದ ಮುಂಗಡವಾಗಿ

ತೆಗೆದುಕೊಂಡಿದ್ದೆ. ಆದರೆ ವೇತನ ಬಿಲ್ಲಿನಲ್ಲಿ ಯಾವುದೇ ಕಂತು ಕಟಾವು ಆಗಿರಲಿಲ್ಲ. ಅದೇ ಸಮಯ ಮೇ ತಿಂಗಳಿಂದ ಆಗಸ್ಟ್ ವರೆಗೆ ಪ್ರಯಾಣ ಭತ್ಯೆ ಹಣ ಸುಮಾರು ರೂ. 1400/– ಬಂದಿತ್ತು, ಅದರ ಜೊತೆಗೆ ಉಳಿದ ರೂ. 600/– ಗಳನ್ನು ಆಪಾದಿತರಿಗೆ ಒಟ್ಟು 2000/– ರೂ. ಗಳನ್ನು ಶ್ರೀ ರಾಮಯ್ಯ ಸಹಾಯಕ ಸಾಂಖ್ಯಿಕ ಅಧಿಕಾರಿ ಅವರ ಸಮ್ಮುಖದಲ್ಲಿ ಕೊಟ್ಟು ಖಜಾನೆಗೆ ಜಮೆ ಮಾಡಲು ಕೇಳಿಕೊಂಡೆ ಎಂದು ಹೇಳಿದರು. ಅವರ ಬಿಲ್ಲುಗಳ ನಕಲು ನಿ.ಪಿ.6 ರಿಂದ ನಿ.ಪಿ.9 ಇರುತ್ತವೆ. ಆದರೆ ಅದರಲ್ಲಿ ತನ್ನ ಸಹಿ ಇರುವುದಿಲ್ಲ. ಆಗ ಆಪಾದಿತರು ತನಗೆ ಅಕ್ವಿಟೆನ್ಸ್ ಪುಸ್ತಕ ಸಿಕ್ಕಿಲ್ಲ ನಾಳೆ ಬಂದು ಸಹಿ ಮಾಡಿ ಎಂದು ಹೇಳಿದರು. ಆದರೆ ಮರುದಿನದಿಂದ ಆಪಾದಿತರು ತನಗೆ ಸಿಗಲಿಲ್ಲ. ಆದುದರಿಂದ ಅಕ್ವಿಟೆನ್ಸ್ ಪುಸ್ತಕದಲ್ಲಿ ರೂ. 1400/– ಬಂದುದಕ್ಕೆ ತಾನು ಸಹಿ ಮಾಡಲು ಆಗಲಿಲ್ಲವೆಂದು ಹೇಳಿದರು ಮತ್ತು ಮುಂದುವರಿಸಿ ನಿ.ಪಿ.3ರ ಮಾಹಿತಿ ಸರಿ ಇದೆ. ತನಗೆ ಆಮೇಲೆ ಆಪಾದಿತರು ತಾನು ಕೊಟ್ಟ ರೂ. 2000/– ಗಳನ್ನು ಖಜಾನೆಗೆ ಕಟ್ಟಿಲ್ಲವೆಂದು ತಿಳಿಯಿತು ಎಂದರು. ನಿ.ಪಿ.10 ರಲ್ಲಿ ನಮೂದಿಸಿದ ತುಟ್ಟಿ ಭತ್ಯೆ ರೂ. 879/– ಆಪಾದಿತರು ತನ್ನ ಕೈಗೆ ಕೊಟ್ಟಿಲ್ಲವೆಂದರು. ನಿ.ಪಿ.11 ಬಸವ ಜಯಂತಿಗೆ ಹಬ್ಬದ ಮುಂಗಡ ಹಣಕ್ಕೆ ತಯಾರಿಸಿದ ಬಿಲ್ಲಿನ ನಕಲು ಎಂದು ಹೇಳಿದರು. ಆಪಾದಿತರ ಮೇಲೆ ಈ ಇಲಾಖಾ ವಿಚಾರಣೆ ಬಾಕಿ ಇದ್ದುದರಿಂದ ಆ ರೂ. 2000/– ಗಳನ್ನು ತನ್ನಿಂದ ಪಡೆಯಲಾಗುವುದಿಲ್ಲವೆಂದು ಹೇಳಿಕೊಂಡರು. ತಾನು ಆ ರೂ. 2000/– ಗಳನ್ನು ಈಗ ಖಜಾನೆಗೆ ಕಟ್ಟಲು ತಯಾರಿದ್ದೇನೆಂದು ನನ್ನ ಮುಂದೆ ಹೇಳಿಕೊಂಡರು. ಪಾಟೀ ಸವಾಲಿಗೆ ಉತ್ತರಿಸುತ್ತಾ ದಿ. 15–07–2009 ರಂದು ನಿ.ಪಿ.3 ರಲ್ಲಿ ಆ ರೂ. 2000/– ಗಳನ್ನು ಆಪಾದಿತರಿಗೆ ಯಾವಾಗ ಕೊಟ್ಟಿದ್ದೇನೆಂದು ನಮೂದಿಸಿಲ್ಲವೆಂದು ಒಪ್ಪಿಕೊಂಡರು. ಮತ್ತು ನಿ.ಪಿ.3 ಕಛೇರಿಗೆ ಕೊಟ್ಟಿದ್ದಕ್ಕೆ ಪಾವತಿ ಪಡೆಯಲಿಲ್ಲವೆಂದು ಹೇಳಿದರು. ಸರ್ಕಾರಕ್ಕೆ ವಾಪಸ್ ಯಾವುದೇ ಹಣವನ್ನು ಕೊಡುವಾಗ ಬರೆದುಕೊಡಬೇಕೆಂದು ತನಗೆ ಗೊತ್ತುಂಟು ಎಂದು ಒಪ್ಪಿಕೊಂಡರು.

**25. ಸರ್ಕಾರಿ ಸಾಕ್ಷಿ ಸಂಖ್ಯೆ 4 ಶ್ರೀಮತಿ ವೀಣಾ ಕುಲಕರ್ಣಿ** ದಿ. 29–06–2009 ರಂದು ಪ್ರಮಾಣೀಕರಿಸಿ ನಾನು ದಿ. 01–12–2006 ರಿಂದ ಹೊಸಕೋಟೆ ತಾಲ್ಲೂಕು ಕಛೇರಿಯಲ್ಲಿ ಗಣತಿದಾರಳಾಗಿ ಕೆಲಸ ಮಾಡುತ್ತಿದ್ದೇನೆ. ದಿ. 14–05–2008 ರಂದು ನಿ.ಪಿ.12 ಬರೆದುಕೊಟ್ಟಿದ್ದೇನೆ, ಅದರಲ್ಲಿ ಆಪಾದಿತರು ತನ್ನಿಂದ 2007 ನೇ ನವೆಂಬರ್‌ದಲ್ಲಿ ರೂ. 5600/– ಗಳನ್ನು ಪಡೆದಿರುವುದಾಗಿ ಬರೆದಿದ್ದೇನೆ ಮತ್ತು ಆ ಹಣ ಕೊಟ್ಟಿದ್ದಕ್ಕೆ ಆಪಾದಿತರು ಯಾವುದೇ ರಸೀದಿ ತನಗೆ ನೀಡಿಲ್ಲ ಮತ್ತು ಹಣವನ್ನು ಆಪಾದಿತರು ಡಿ.ಸಿ.ಪಿ.ಎಸ್. ಗೆ ತನ್ನ ವೇತನದ ಭತ್ಯೆಯ ಶೇ.10 ನೀಡಬೇಕಾಗಿದೆ ಎಂದು ಹೇಳಿರುವುದರಿಂದ ಆಪಾದಿತರಿಗೆ ಕೊಟ್ಟಿದ್ದೇನೆ. ಆ ಬಗ್ಗೆ ಯಾವುದೇ ಸರ್ಕಾರಿ ಆಜ್ಞೆ ತಾನು ನೋಡಿಲ್ಲ ಮತ್ತು ತನಗೆ ಆಪಾದಿತರು ತೋರಿಸಿಲ್ಲ. ಪಾಟೀ ಸವಾಲಿಗೆ ಉತ್ತರಿಸುತ್ತಾ ಯಾವುದೇ ಹಣವನ್ನು ಸರ್ಕಾರಕ್ಕೆ ಕೊಡಬೇಕಾದಾಗ ಮನವಿ ಜೊತೆಗೆ ಕೊಡಬೇಕೆಂದು ತನಗೆ ಗೊತ್ತಿದೆ ಎಂದು ಒಪ್ಪಿಕೊಂಡರು. ಆಪಾದಿತರು ಸೂಚಿಸಿದಂತೆ ತಾನು ರೂ. 5600/– ಗಳನ್ನು ಅವರಿಗೆ ಕೊಟ್ಟಿಲ್ಲ ಎನ್ನುವುದನ್ನು ನಿರಾಕರಿಸಿದರು. ಆಪಾದಿತರು ರೂ. 5600/– ಗಳನ್ನು ತನ್ನಿಂದ ಪಡೆದ ಬಗ್ಗೆ ತಾನು ರಸೀದಿ ಕೇಳುತ್ತಿದ್ದೆ. ಆಪಾದಿತರ ಮೇಲೆ ಅಸಮಧಾನದಿಂದ ನಿ.ಪಿ.12 ಬರೆದುಕೊಟ್ಟಿರುವುದನ್ನು ಈ ಸಾಕ್ಷಿ ಪಾಟೀ ಸವಾಲು ಸಮಯ ಸ್ಪಷ್ಟವಾಗಿ ನಿರಾಕರಿಸಿದ್ದಾರೆ. ಮರು ವಿಚಾರಣೆ ಸಮಯ ತಾನು ಅಲ್ಲಿಂದ ವರ್ಗಾವಣೆಯಾಗುವ ತನಕ ಖಜಾನೆಗೆ ಕಟ್ಟಿದ್ದ ಹಣಕ್ಕೆ ಆಪಾದಿತರು ಚಲನ್ ನೀಡದಿದ್ದುದರಿಂದ ತಾನು ನಿ.ಪಿ.12 ಬರೆದುಕೊಡಬೇಕಾಯಿತೆಂದು ತಿಳಿಸಿದರು.

**26. ಸರ್ಕಾರಿ ಸಾಕ್ಷಿ ಸಂಖ್ಯೆ 5 ಶ್ರೀಮತಿ ಮಂಜುಳ** ದಿ. 28–07–2009 ರಂದು ತಾನು ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ದಿ. 09–03–2006 ರಿಂದ ಬೆರಳಚ್ಚುಗಾರಳಾಗಿ ಕೆಲಸ ಮಾಡುತ್ತಿದ್ದೆ. ದಿ: 29–01–2008ರ ಆಜ್ಞೆಯಂತೆ ಆಪಾದಿತರಿಂದ ಅವರ ಕೆಲಸದ ಪ್ರಭಾರೆ ತೆಗೆದುಕೊಂಡೆ ಮತ್ತು ಮೂರು ತಿಂಗಳು ಅವರ ಕೆಲಸವನ್ನು ತಾನು ಮಾಡಿದೆ ಮತ್ತು ತಾನು ಆಪಾದಿತರಿಂದ ಪಡೆದ ಕಡತದ ವಿವರ ನಿಪಿ14 ರಲ್ಲಿದೆ. ಅದರಲ್ಲಿ ಆಪಾದಿತರು ಮತ್ತು ತಾನು ಸಹಿ ಮಾಡಿದ್ದೇವೆ ಮತ್ತು ನಿ.ಪಿ.14 ನ್ನು ಆಪಾದಿತರೇ ಬರೆದಿರುತ್ತಾರೆ ಮತ್ತು ಬೇರೆ ಯಾವುದೇ ಪ್ರಭಾರವನ್ನು ತಾನು ಆಪಾದಿತರಿಂದ ತೆಗೆದುಕೊಳ್ಳಲಿಲ್ಲವೆಂದರು. ತನ್ನ ನೇಮಕಾತಿ ಆದೇಶದಲ್ಲಿ ತಾನು ಕಛೇರಿಯ ಸಹಾಯಕಳೆಂದು ನಮೂದಿಸಿಲ್ಲವೆಂದು ಹೇಳಿದರು ಮತ್ತು ಆ ಕಛೇರಿಯಲ್ಲಿ ಗುಮಾಸ್ತ ಮತ್ತು ಬೆರಳಚ್ಚುಗಾರರ ಹುದ್ದೆ ಇಲ್ಲವೆಂದು ಹೇಳಿದರು. ವರ್ಗವಾದಾಗ ಸಂಪೂರ್ಣ ಪ್ರಭಾರೆ ಕೊಟ್ಟ ಮೇಲೆ ವರ್ಗವಾದ ಸಹಾಯಕರನ್ನು ಬಿಡುಗಡೆ ಮಾಡಬೇಕೆಂದು ಕಛೇರಿ ನಿಯಮಾವಳಿಯಲ್ಲಿ ಇರುವುದನ್ನು ಒಪ್ಪಿಕೊಂಡರು. ತಾನು ಕಛೇರಿಯಲ್ಲಿ ದಿನಚರಿ ಇಟ್ಟಿಲ್ಲ. ಆದರೂ ಆಪಾದಿತರು ಕೊಟ್ಟ ಕಡತದಲ್ಲಿ ಮುಂದಿನ ಕಾರ್ಯಾಚರಣೆ ತಾನು ಮಾಡಿದ್ದೇನೆ. ಮರು ಸವಾಲಿಗೆ ಉತ್ತರಿಸುತ್ತಾ ತನಗೆ 12 ವರ್ಷ ಕಛೇರಿ ಕೆಲಸದ ಅನುಭವವಿದೆ ಎಂದು ಹೇಳಿದರು.

**27. ಸರ್ಕಾರಿ ಸಾಕ್ಷಿ ಸಂಖ್ಯೆ 6 ಡಾ. ವಿ. ಮುನಿರಾಜು** ನಿ.ಪಿ.12 ನ್ನು ಶ್ರೀಮತಿ ವೀಣಾ ಕುಲಕರ್ಣಿ ದಿ: 14–05–2008 ರಂದು ನೀಡಿದರು ಮತ್ತು ತಾನು ಅದನ್ನು ನಿ.ಪಿ.15 ರಂತೆ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳಿಗೆ ಮುಂದಿನ ಕ್ರಮಕ್ಕಾಗಿ ಕಳುಹಿಸಿಕೊಟ್ಟೆ. ಆಪಾದಿತರು ತಾನು ಆ ಕಛೇರಿಯಲ್ಲಿದ್ದ ಅವಧಿಯಲ್ಲಿ ಅಂದರೆ 07–11–2007 ರಿಂದ 12–06–2008ರ ವರೆಗೆ ಆಪಾದಿತರು ಕೆಲಸ ಮಾಡುತ್ತಿದ್ದರು ಮತ್ತು ಆಡಳಿತ ಶಾಖೆಯ ನಗದು, ಬಿಲ್ಲು ತಯಾರಿಕೆ ಮತ್ತು ವಾರ್ಷಿಕ ವೇತನ ಬಡ್ತಿ, ಸೇವಾ ಪುಸ್ತಕ ಬರೆಯುವುದು, ನಗದು ಪುಸ್ತಕ ಬರೆಯುವುದು, ರಜೆಗೆ ಸಂಬಂಧಿಸಿದ ಕೆಲಸ ಇತ್ಯಾದಿ ಮಾಡುತ್ತಿದ್ದರು ಮತ್ತು ನಿ.ಪಿ.13 ರಲ್ಲಿ ತನ್ನ ಸಹಿ ಇದೆ. ಆಪಾದಿತ ನೌಕರರು ಪೂರ್ತಿ ಪ್ರಭಾರೆಯನ್ನು ಶ್ರೀಮತಿ ಮಂಜುಳರವರಿಗೆ ಕೊಟ್ಟಿರಲಿಲ್ಲ. ನಿ.ಪಿ.16 ರಲ್ಲಿ 2 ದಿನಗಳೊಳಗೆ ಆಪಾದಿತರು ತನ್ನ ಕೆಲಸದ ಪ್ರಭಾರೆಯನ್ನು ಕೊಡಬೇಕೆಂದು ಆಜ್ಞೆ ಮಾಡಿದ್ದೆ, ಆದರೆ ಆಪಾದಿತರು ಆ ಆಜ್ಞೆಯನ್ನು ಪಾಲಿಸಲಿಲ್ಲ. ಆದುದರಿಂದ 23–05–2008 ರಂದು ನಿಪಿ17 ಮಹಜರ್‌ನಲ್ಲಿ ಬರೆದಂತೆ ಪ್ರಭಾರೆ ತೆಗೆದುಕೊಳ್ಳಬೇಕಾಯಿತು. ದಿ. 11–02–2008 ರಿಂದ ಆಪಾದಿತರು ಕೆಲಸ ಮಾಡಿದರು ಮತ್ತು ದಿ. 15–05–2008 ರಂದು ಆಪಾದಿತರು ಗೈರು ಹಾಜರಿ ಬಗ್ಗೆ ನಿಪಿ18 ರಂತೆ ಆಜ್ಞೆ ಮಾಡಿದೆ ಮತ್ತು ಆಪಾದಿತರಿಂದ ಅವರ ಕೆಲಸ ವೈಫಲ್ಯದ ಬಗ್ಗೆ ನೋಟಿಸ್ ನೀಡಿದೆ. ಅಲ್ಲದೆ 01–05–2008 ರಿಂದ 22–06–2008 ರ ವರೆಗೆ ಆಪಾದಿತರು ಗೈರು ಹಾಜರಿದ್ದರು ಮತ್ತು ಹಾಜರಿ ಪುಸ್ತಕದಲ್ಲಿ ಅಂದರೆ ನಿಪಿ19 ರಲ್ಲಿ ಆಪಾದಿತರು ಗೈರು ಹಾಜರಾದ ಬಗ್ಗೆ ನಮೂದಿಸಿದ್ದೇನೆ. ಆ ಅವಧಿಗೆ ಆಪಾದಿತರು ರಜೆ ಅರ್ಜಿ ಬರೆದಿಲ್ಲ ಮತ್ತು ತನ್ನ ಪರವಾನಗಿ ತೆಗೆದುಕೊಂಡಿಲ್ಲ ಮತ್ತು ಅವರ ಗೈರು ಹಾಜರಿಯಿಂದ ಕಛೇರಿ ಕೆಲಸಕ್ಕೆ ತೊಂದರೆಯಾಯಿತು. ನಿಪಿ20 ಆಪಾದಿತರು ಕೊಡದಿರುವ ದಾಖಲೆಗಳನ್ನು ಮಹಜರ್ ಮಾಡಿ ಸ್ವಾಧೀನ ಪಡಿಸಿದ್ದನ್ನು ನಮೂದಿಸಲಾಗಿದೆ ಎಂದು ಹೇಳಿದರು. ದಿ. 04–10–2007

ರಿಂದ ತನ್ನ ಕಛೇರಿಯಲ್ಲಿ ಕುಮಾರಿ ಆರ್.ಜ್ಯೋತಿ ಕೆಲಸ ಮಾಡುತ್ತಿದ್ದರೆಂದು ಹೇಳಿದರು, ಅವರ ವೇತನವನ್ನು ಸ್ವಲ್ಪ ತಡವಾಗಿ ಕೊಡಲಾಯಿತೆಂದು ಹೇಳಿದರು. ದಿ. 04–10–2007 ರಿಂದ 28–02–2008 ರ ತನಕದ ಅವರ ವೇತನ ಬಿಲ್ಲು ರೂ. 34,774/– ಗಳನ್ನು ಆಪಾದಿತರೇ ತಯಾರು ಮಾಡಿದರು ಮತ್ತು 17–03–2008 ರಂದು ಆ ಚೆಕ್ ತರಿಸಲಾಯಿತು ಮತ್ತು ಚೆಕ್ ಪುಸ್ತಕದಲ್ಲಿ ನಿಪಿ21 ರಂತೆ ಆ ವಿಷಯ ಆಪಾದಿತರು ನಮೂದಿಸಿದ್ದಾರೆ ಮತ್ತು ತಾನು ಅದಕ್ಕೆ ಸಹಿ ಮಾಡಿದ್ದೇನೆ. ಕಛೇರಿ ನಗದು ಪುಸ್ತಕ ನಿಪಿ23 ರಲ್ಲಿ ಆ ಹಣ ರೂ. 34,774/– ಗಳು ಬಂದಿರುವುದನ್ನು ಬರೆಯಲಾಗಿದೆ ಮತ್ತು ಆ ಸಮಯ ನಗದು ಪುಸ್ತಕ ಮತ್ತು ಅಕ್ವಿಟೆನ್ಸ್ ಪುಸ್ತಕವನ್ನು ಆಪಾದಿತರೇ ಬರೆಯುತ್ತಿದ್ದರೆಂದು ಈ ಸಾಕ್ಷಿ ಹೇಳಿದರು. ನಿಪಿ22 ರಲ್ಲಿ ಆಪಾದಿತರೇ ತನ್ನ ಕೈಯಲ್ಲಿ ತಿದ್ದುಪಡಿ ಮಾಡಿದ್ದನ್ನು ತೋರಿಸಿಕೊಟ್ಟರು. ದಿ. 18–10–2009 ರಂದು ಪಾಟೀ ಸವಾಲಿಗೆ ಉತ್ತರಿಸುತ್ತಾ ತಾನು ವಾರದ ಯಾವ ದಿನಗಳಲ್ಲಿ ಬೆಂಗಳೂರು ಗ್ರಾಮಾಂತರ ಕಛೇರಿಯಲ್ಲಿ ಕೆಲಸ ಮಾಡುತ್ತಿದ್ದೆ ಮತ್ತು ರಾಮನಗರ ಕಛೇರಿಯಲ್ಲಿ ಕೆಲಸ ಮಾಡುತ್ತಿದ್ದೆನೆಂದು ಹೇಳಲಾರೆನೆಂದರು. ಪ್ರಭಾರೆಯಲ್ಲಿ ಇದ್ದುದರಿಂದ ರಾಮನಗರದಲ್ಲಿ ತಾನು ಎಲ್ಲಾ ದಿನಗಳಲ್ಲಿ ಇರುತ್ತಿರಲಿಲ್ಲವೆಂದು ಒಪ್ಪಿಕೊಂಡರು. ರಾಮನಗರದಲ್ಲಿ ತಾನು ಇಲ್ಲದಿದ್ದಾಗ ತನ್ನ ಕೆಲಸವನ್ನು ನಿರ್ವಹಿಸಲು ಬೇರೆ ಯಾರಿಗೂ ವಹಿಸಿಕೊಟ್ಟಿಲ್ಲವೆಂದು ಒಪ್ಪಿಕೊಂಡರು. ನಿ.ಪಿ.12 ಪಡೆದ ಮೇಲೆ ಪೂರ್ವಭಾವಿ ತನಿಖೆ ತಾನೇನು ಮಾಡಿಲ್ಲ. ದಿ. 22–05–2008 ರಂದು ತಯಾರಿಸಿದ ನಿಪಿ16 ಆಪಾದಿತರಿಗೆ ದಿ. 23–05–2008 ರಂದು ತಲುಪಿಲ್ಲ ಎಂಬುದನ್ನು ಒಪ್ಪಿಕೊಂಡರು. ನಿ.ಪಿ.17 ನ್ನು ತನ್ನ ಕಛೇರಿಯ ಸಿಬ್ಬಂಧಿಯವರು ತಯಾರಿಸಿ ಸಹಿ ಮಾಡಿದ್ದಾರೆ ಮತ್ತು ಅದರ ಅನುಬಂಧದಲ್ಲಿ ಕೊನೆಗೆ ತನ್ನ ಸಹಿ ಮಾತ್ರ ಇದೆ. ಆಪಾದಿತರ ಸ್ವಾಧೀನವಿದ್ದ ಅಲ್ಮೇರಾಗಳ ಬೀಗದ ಕೈ ತನ್ನ ಸ್ವಾಧೀನ ಇರಲಿಲ್ಲವೆಂದು ಹೇಳಿಕೊಂಡರು. ನಿ.ಪಿ.17ರ ಪುಟ 2, 27ನೇ ಕ್ರಮ ಸಂಖ್ಯೆಯಲ್ಲಿ ಶ್ರೀಮತಿ ಶಕುಂತಲಾ ಚರಂತಿಮಠ ಸೇವಾ ಪುಸ್ತಕಗಳ ಪಟ್ಟಿ ಇರುತ್ತದೆಂದು ಹೇಳಿದರು. ನಿ.ಪಿ.17 ರಲ್ಲಿ ತನ್ನ ಸಹಿ 20–05–2008 ರಂದು ಇದೆ ಎಂದು ಒಪ್ಪಿಕೊಂಡರು. ನಿ.ಪಿ.18 ತಾನು ಆಮೇಲೆ ತಯಾರುಮಾಡಿದೆ ಅನ್ನುವ ಸೂಚನೆಯನ್ನು ಈ ಸಾಕ್ಷಿ ನಿರಾಕರಿಸಿದ್ದಾರೆ. ನಿ.ಪಿ.19 ರಲ್ಲಿ ಆಪಾದಿತರ ಗೈರು ಹಾಜರಿಯನ್ನು ತಾನೇ ನಮೂದಿಸಿದ್ದೇನೆ ಎನ್ನುವುದಕ್ಕೆ ತಾನು ಬೇರೆ ಸಹಿ ಮಾಡಿಲ್ಲವೆಂದು ಹೇಳಿಕೊಂಡರು. ಈ ಸಾಕ್ಷಿಯ ಸಹಿ ಆ ಹಾಜರಾತಿ ಪುಸ್ತಕದ ಕೊನೆಯಲ್ಲಿ ಇದೆಯೆಂದು ಹೇಳಿದರು. ಆಪಾದಿತರು ಕೆಲಸದ ಒತ್ತಡ ಇದೆ ಎಂದು ರಜೆ ಕೇಳಿಕೊಂಡರು ಅನ್ನುವ ಸೂಚನೆಯನ್ನು ಪಾಟೀ ಸವಾಲು ಸಮಯ ಸ್ಪಷ್ಟವಾಗಿ ನಿರಾಕರಿಸಿದ್ದಾರೆ. ನಿಪಿ 20 ಕ್ಕೆ ತನ್ನ ಸಿಬ್ಬಂಧಿಯವರು ಮಾತ್ರ ಸಹಿ ಮಾಡಿದ್ದಾರೆ ಎಂದು ಒಪ್ಪಿಕೊಂಡರು ನಿಪಿ22 ನಕಲಿನಲ್ಲಿ ತನ್ನ ಸಹಿ ಕಾಣುವುದಿಲ್ಲವೆಂದು ಒಪ್ಪಿಕೊಂಡರು. ನಿ.ಪಿ.21 ಮತ್ತು 23 ಕ್ಕೆ ತಾನೇ ಸಹಿ ಮಾಡಿದ್ದೇನೆ ಎಂದು ಒಪ್ಪಿಕೊಂಡರು. ನಿ.ಪಿ.23 ರಲ್ಲಿ ಕು. ಜ್ಯೋತಿಗೆ ರೂ. 34,774/– ಗಳನ್ನು ಕೊಡಲಾಗಿದೆಯೆಂದು ತಾನು ದೃಢೀಕರಿಸಿದ್ದೇನೆ ಎಂದು ಅದನ್ನು ನೋಡಿ ಹೇಳಿದರು. ರೂ. 34774/– ಗಳು ಖರ್ಚಾದ ಬಗ್ಗೆ ಖಜಾನೆಗೆ ಮತ್ತು ಮೇಲಾಧಿಕಾರಿಗಳಿಗೆ ತ:ಖ್ತೆ ಕಳುಹಿಸಿದ್ದೇನೆಂದು ಒಪ್ಪಿಕೊಂಡರು. ಮರು ಸವಾಲಿನ ಸಮಯ ಬಟವಾಡೆ ಪುಸ್ತಕದಲ್ಲಿ ತನ್ನ ಸಹಿ ಹಸಿರು ಬಣ್ಣದಲ್ಲಿದೆ ಎಂದು ಹೇಳಿದರು.

**28. ಸರ್ಕಾರಿ ಸಾಕ್ಷಿ ಸಂಖ್ಯೆ 7 ಕು. ಆರ್. ಜ್ಯೋತಿ** ದಿ. 18–08–2009 ರಂದು ನನ್ನ ಮುಂದೆ ಸಾಕ್ಷಿ ನೀಡಿ ಆಪಾದಿತರು ಅವರಿಗೆ ಬರಬೇಕಾದ ವೇತನ ಅಕ್ಟೋಬರ್ 2007 ರಿಂದ ಫೆಬ್ರವರಿ 2008ರ ವರೆಗೆ ಒಟ್ಟು ಮೊತ್ತ ರೂ. 34774/– ರಲ್ಲಿ ಆಪಾದಿತರು ರೂ. 32774/– ನೀಡಿದರು ಮತ್ತು ಅದೇ ರೀತಿ ಅಕ್ವಿಟೆನ್ಸ್ ರಿಜಿಸ್ಟರ್‌ನಲ್ಲಿ ತಿದ್ದುಪಡಿ ಮಾಡಿದ್ದಾರೆ ಮತ್ತು ತಾನು ನಿ.ಪಿ.24 ರಂತೆ ದೂರು ನೀಡಿದೆ ಎಂದು ಹೇಳಿದರು.

**29. ಸರ್ಕಾರಿ ಸಾಕ್ಷಿ ಸಂಖ್ಯೆ 8 ಶ್ರೀ ಎಸ್. ಸುದರ್ಶನ್** ದಿ. 18–08–2009 ರಂದು ನನ್ನ ಮುಂದೆ ಸಾಕ್ಷಿ ನೀಡಿ ದಿ. 24–06–2008 ರಂದು ನಿ.ಪಿ.22 ಮತ್ತು 24ರ ಜೊತೆಗೆ ಸಹಿ ಮಾಡಿ ನಿ.ಪಿ.25 ನ್ನು ಕೇಂದ್ರ ಕಛೇರಿಗೆ ರವಾನೆ ಮಾಡಿದೆ. ಒಟ್ಟಿಗೆ ನಿ.ಪಿ.26 ಮತ್ತು 27 ಕಳುಹಿಸಿದೆ ಎಂದು ಹೇಳಿದರು.

**30. ಸರ್ಕಾರಿ ಸಾಕ್ಷಿ ಸಂಖ್ಯೆ 9 ಶ್ರೀ ಪಿ. ಮಂಜು** ದಿ. 18–08–2009 ರಂದು ಆಪಾದಿತರು ಹೆದರಿಸಿದ ಕಾರಣ ಡಿ.ಸಿಪಿ.ಎಸ್.ಗೆ ಎಂದು ರೂ. 2500/– ಗಳನ್ನು ಆಪಾದಿತರಿಗೆ ಕೊಟ್ಟೆ. ಅವರು ರಸೀದಿ ಕೊಡಲಿಲ್ಲ. ಆದ್ದರಿಂದ ನಿ.ಪಿ.26 ರಂತೆ ಆಪಾದಿತರ ಮೇಲೆ ಜೂನ್ 2008 ರಂದು ದೂರು ನೀಡಿದೆ ಎಂದರು.

**31. ಸರ್ಕಾರಿ ಸಾಕ್ಷಿ ಸಂಖ್ಯೆ 10 ಶ್ರೀಮತಿ ಬಿ.ಎನ್. ಜಯಶ್ರೀ** ದಿ. 03–09–2009 ರಂದು ನನ್ನ ಮುಂದೆ ಪ್ರಮಾಣ ಮಾಡಿ ನನ್ನ ಮುಂದೆ ದಿ. 05–10–2007 ರಂದು ಆಪಾದಿತರಿಗೆ ನಿ.ಪಿ.28 ರಂತೆ ಜ್ಞಾಪನ ನೀಡಿದೆ ಮತ್ತು ಆಪಾದಿತರು ದಿ. 29–10–2007 ರಂದು ನೀಡಿದ ಉತ್ತರದಲ್ಲಿ ಆತ್ಮಹತ್ಯೆ ಮಾಡಿಕೊಳ್ಳುತ್ತೇನೆಂದು ಬರೆದಿದ್ದರು. ಆದ್ದರಿಂದ ನಿ.ಪಿ.30 ರಂತೆ ಆಪಾದಿತರಿಗೆ ಪತ್ರ ಬರೆದರು ಮತ್ತು ಆತ್ಮಹತ್ಯೆ ಮಾಡಿಕೊಂಡರೆ ಆಪಾದಿತ ನೌಕರನೇ ಜವಾಬ್ದಾರಿ ಎಂದು ಬರೆದು ಉತ್ತರ ಕಳುಹಿಸಿದೆ ಎಂದರು. ಕಛೇರಿ ಕಡತದಲ್ಲಿ ಕಡತದ ಟಿಪ್ಪಣಿ ಸಂಖ್ಯೆ 29 ರಿಂದ 34 ನೋಡಿಕೊಂಡು ಇತರ ಪ್ರಶ್ನೆಗಳಿಗೆ ಸಾಕ್ಷಿ ಉತ್ತರಿಸಿದರು. ಆಪಾದಿತರು ಟಿಪ್ಪಣಿ ಪುಟ ಸಂಖ್ಯೆ 1 ರಿಂದ 5 ಅವಲಂಬಿಸಿ ನಿ.ಡಿ.2 ಎಂದು ಗುರುತಿಸಲಾಯಿತು.

**ಶಿಸ್ತು ಪ್ರಾಧಿಕಾರಿಯ ಅವಲಂಬಿಸಿದ ದಾಖಲೆಗಳನ್ನು ಪರಿಶೀಲಿಸುವ**

**32. ನಿ.ಪಿ.1 ರಲ್ಲಿ** ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು ದಿ: 21–05–2007 ರಂದು ಇಲ್ಲಿಯ ಇಲಾಖಾ ನಿರ್ದೇಶಕರಿಗೆ ಬರೆದ ಪತ್ರ. ಅದರಲ್ಲಿ ಆಪಾದಿತರು ರಜೆಯಲ್ಲಿ ಹೋಗಿದ್ದರಿಂದ ಕಛೇರಿ ಕೆಲಸಕ್ಕೆ ತೊಂದರೆ ಆಗಿದೆ. ಅವರ ಬೇಜವಾಬ್ದಾರಿಯಿಂದ ಸಮಸ್ಯೆಗಳು ಪುನರಾವರ್ತನೆಯಾಗುತ್ತಿವೆ, ಕಪಾಟಿನ ಕೀ ಕೊಡದೇ ಹೋಗಿದ್ದಾರೆ, ಆದ್ದರಿಂದ ಕಪಾಟಿನ ಬೀಗ ಒಡೆದು ಕೆಲಸಕಾರ್ಯವನ್ನು ಸಮರ್ಪಕ ರೀತಿಯಲ್ಲಿ ನಿರ್ವಹಿಸಲು ಅನುಮತಿ ಕೋರಿದ್ದಾರೆ ಮತ್ತು ಬದಲಿಗೆ ನೇಮಕ ಮಾಡಲು ಕೇಳಿಕೊಂಡಿದ್ದಾರೆ.

**33. ನಿ.ಪಿ.2 ರಲ್ಲಿ** ಆಪಾದಿತರಿಗೆ ಜ್ಞಾಪನ ಪತ್ರ ದಿ. 18–05–2007 ರಂದು ಬರೆದು ಆಪಾದಿತರು ಕಛೇರಿಯಲ್ಲಿ ಇಲ್ಲದೆ ತೊಂದರೆ ಆಗಿದ್ದಕ್ಕೆ, ಬೇರೆ ಬೇರೆ ಕೆಲಸ ಬಾಕಿ ಆದ ಬಗ್ಗೆ ಬರೆದು ಅವರ ಮೇಲೆ ಶಿಸ್ತು ಕ್ರಮ ತೆಗೆದುಕೊಳ್ಳುವುದಾಗಿ ಸೂಚಿಸಿದ್ದಾರೆ.

**34. ನಿ.ಪಿ.3** ರಲ್ಲಿ ದಿ. 05–09–2007 ರಂದು ಶ್ರೀ ಕೆ. ಸಿದ್ದರಾಜು ಗ್ರಾಮಾಂತರ ಜಿಲ್ಲೆಯ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳಿಗೆ ಆಪಾದಿತರು ಮುಂಗಡ ಹಣ ರೂ. 2000/– ಗಳನ್ನು ಕಛೇರಿಯ ಖಾತೆಗೆ ಕಟ್ಟುವಂತೆ ಆಪಾದಿತರಿಗೆ ಕೊಟ್ಟಿದ್ದೇನೆ. ತಾನು ಮುಂಗಡ ಹಣ ಪಡೆದಿದ್ದೆ. ಆ ಹಣದ ಬಾಬ್ತು ಆ ಹಣ ರೂ. 2000/– ಗಳನ್ನು ಕೊಟ್ಟಿದ್ದೆ ಎಂದು ಬರೆದುಕೊಟ್ಟಿದ್ದಾರೆ.

**35. ನಿ.ಪಿ.4 ರಲ್ಲಿ** ದಿ. 13–03–2007 ರಂದು ಅದೇ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು ಬೆಂಗಳೂರು ಇಲಾಖಾ ನಿರ್ದೇಶಕರಿಗೆ ಬರೆದ ಪತ್ರದಲ್ಲಿ ಆಪಾದಿತರು ಉತ್ತಮವಾಗಿ ಕಾರ್ಯನಿರ್ವಹಿಸುವುದರಿಂದ ಇವರನ್ನು ವರ್ಗಾವಣೆ ಮಾಡಬಾರದೆಂದು ತಮ್ಮಲ್ಲಿ ವಿನಂತಿಸಿಕೊಂಡಿರುವುದು ಪತ್ರದಲ್ಲಿ ಕಂಡುಬರುತ್ತದೆ.

**36. ನಿ.ಪಿ.5 ರಲ್ಲಿ** ಅದೇ ಅಧಿಕಾರಿ ನಿ.ಪಿ.4 ನ್ನು ಯಾವ ಸಂದರ್ಭದಲ್ಲಿ ಬರೆದುಕೊಡಲಾಯಿತೆಂದು ದಿ:08–08–2007 ರಂದು ನಿರ್ದೇಶಕರಿಗೆ ನಿ.ಪಿ.5 ರಲ್ಲಿ ಕ್ಷಮಾಪಣೆ ಕೋರಿ ತಾನು ಅದನ್ನು ಗಮನಿಸದೇ ಸಹಿ ಹಾಕಿ ಕಳುಹಿಸಿದ್ದೇನೆ. ಬೇರೆ ಕಡೆಗೆ ಬೆಳಿಗ್ಗೆ 9–45 ಕ್ಕೆ ಹೋಗುವ ಸಮಯದಲ್ಲಿ ಬೇರೆ ಪತ್ರಗಳೊಂದಿಗೆ ಆ ಪತ್ರವನ್ನು ಇಟ್ಟಿರುವುದರಿಂದ ವಿಷಯವನ್ನು ಗಮನಿಸದೆ ಆಪಾದಿತರು ಆ ರೀತಿ ಮಾಡುವ ಸಂಶಯ ಇಲ್ಲದೇ ಇದ್ದುದರಿಂದ, ಸಹಿ ಮಾಡಿದೆ ಎಂದು ವಿವರಿಸಿ ಬರೆದುಕೊಟ್ಟಿದ್ದಾರೆ.

**37. ನಿ.ಪಿ.6 ರಿಂದ ನಿ.ಪಿ.10** ರವರೆಗೆ ಪ್ರತಿ ತಿಂಗಳು ಇಲಾಖೆಯಿಂದ ಗ್ರಾಮಾಂತರ ಜಿಲ್ಲೆಯಿಂದ ಪಡೆದ ಪ್ರವಾಸ ಭತ್ಯೆ ಹಾಗೂ ಹಬ್ಬದ ಮುಂಗಡ ವಿಷಯ ಇಲಾಖೆಗೆ ಕಳುಹಿಸಿದ ಬೇರೆ ಬೇರೆ ತ:ಖ್ತೆಗಳ ನಕಲು. ನಿಪಿ10ರಲ್ಲಿ ರೂ. 879/– ಗಳ ವ್ಯತ್ಯಾಸ ಆದುದನ್ನು ಬರೆಯಲಾಗಿದೆ. ಆ ತ:ಖ್ತೆಗಳು ಮೇ 2007 ರಿಂದ ಜುಲೈ 2007ರ ವರೆಗೆ ಸಂಬಂಧಪಟ್ಟ ತ:ಖ್ತೆಗಳು.

**38. ನಿ.ಪಿ.11 ರಲ್ಲಿ** ಶ್ರೀ ಕೆ. ಸಿದ್ದರಾಜು ರವರಿಗೆ ರೂ. 2000/– ಗಳ ಹಬ್ಬದ ಮುಂಗಡ ಮಾರ್ಚ್ 2007 ರಲ್ಲಿ ತೆಗೆದಿರುವುದನ್ನು ಕಾಣಿಸಲಾಗಿದೆ. ಬೆಂಗಳೂರು ನಿರ್ದೇಶಕರು ದಿ. 30–03–2007 ರಂದು ಮಂಜೂರಾತಿ ನೀಡಿದ ವೈದ್ಯಕೀಯ ವೆಚ್ಚ ಹಾಗೂ ಮುಂಗಡ ಹಣ ರೂ. 2000/– ಮಂಜೂರು ಆಗಿರುವುದು ನಮೂದಿಸಲಾಗಿದೆ.

**39. ನಿ.ಪಿ.12 ರಲ್ಲಿ** ಶ್ರೀಮತಿ ವೀಣಾ ಕುಲಕರ್ಣಿ ಆಪಾದಿತರ ಮೇಲೆ ಡಿಸೆಂಬರ್ 2007 ರಲ್ಲಿ ರೂ. 5600/– ಗಳನ್ನು ಅವರು ಕೇಳಿದಂತೆ ಡಿ.ಸಿ.ಪಿ.ಎಸ್.ಗೆ ಎಂದು ಆಪಾದಿತರು ವಸೂಲು ಮಾಡಿರುವುದನ್ನು ದಿ. 14–05–2008 ರಂದು ಬರೆದುಕೊಟ್ಟಿದ್ದಾರೆ.

**40. ನಿ.ಪಿ.13 ರಲ್ಲಿ** ದಿ. 29–01–2008 ರಂದು ಆಪಾದಿತರನ್ನು ಬೆಂಗಳೂರು ಗ್ರಾಮಾಂತರ ಜಿಲ್ಲೆಯಿಂದ ರಾಮನಗರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿಗೆ ವರ್ಗ ಮಾಡಿರುವುದಾಗಿ ದಿ. 31–01–2008 ರಂದು ಅವರನ್ನು ಕಛೇರಿಯಿಂದ ಬಿಡುಗಡೆ ಮಾಡಲಾಗಿದೆ. ಅವರ ಪ್ರಭಾರೆಯನ್ನು ಶ್ರೀಮತಿ ಸಿ. ಮಂಜುಳ, ಬೆರಳಚ್ಚುಗಾರರು ತೆಗೆದುಕೊಳ್ಳಬೇಕೆಂದು ಆಜ್ಞಾಪಿಸಲಾಗಿದೆ.

**41. ನಿ.ಪಿ.14 ರಲ್ಲಿ** ಆಪಾದಿತರು ಶ್ರೀಮತಿ ಸಿ. ಮಂಜುಳ ರವರಿಗೆ 167 ಕಡತಗಳನ್ನು ಕೊಟ್ಟಿರುವುದನ್ನು ನಮೂದಿಸಲಾಗಿದೆ.

**42. ನಿ.ಪಿ.15 ರಲ್ಲಿ** ದಿ. 23–06–2008 ರಂದು ಶ್ರೀಮತಿ ವೀಣಾ ಕುಲಕರ್ಣಿ ದಿ. 14–05–2008 ರಂದು ನೀಡಿದ ಮನವಿಯನ್ನು ಮುಂದಿನ ಕ್ರಮಕ್ಕಾಗಿ ರಾಮನಗರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿಗೆ ಕಳುಹಿಸಿದ್ದು ಕಂಡುಬರುತ್ತದೆ.

**43. ನಿ.ಪಿ.16 ರಲ್ಲಿ** ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು ಆಪಾದಿತರಿಗೆ ಪತ್ರ ಬರೆದು ಅದು ತಲುಪಿದ 2 ದಿನಗಳೊಳಗಾಗಿ ಖುದ್ದಾಗಿ ಕಛೇರಿಗೆ ಬಂದು ದಾಖಲಾತಿ ಮತ್ತು ಕಡತಗಳನ್ನು ನೀಡಲು ಆಜ್ಞೆ ನೀಡಿದ್ದಾರೆ.

**44. ನಿ.ಪಿ.17 ರಲ್ಲಿ** ದಿ. 23–05–2008 ರಂದು ಬೆಂಗಳೂರು ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು ಆಪಾದಿತರ ಕಪಾಟನ್ನು ಒಡೆದಾಗ ಸಿಕ್ಕಿದ 170 ದಾಖಲೆಗಳ ಪಟ್ಟಿ ಹಾಗೂ ಕಛೇರಿ ಸಿಬ್ಬಂದಿಗಳ ಸಹಿ, ಕೊನೆಗೆ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಸಹಿಯು ಇರುತ್ತದೆ.

**45. ನಿ.ಪಿ.18 ರಲ್ಲಿ** ದಿ. 15–05–2008 ರಂದು ರಾಮನಗರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು ಆಪಾದಿತರಿಗೆ ಜ್ಞಾಪನ ಪತ್ರ ನೀಡಿ ಶಿಸ್ತಿನ ಕ್ರಮ ಏಕೆ ತೆಗೆದುಕೊಳ್ಳಬಾರದೆಂದು ಸಮಜಾಯಿಸಿ ನೀಡಲು ಅವರ ಗೈರು ಹಾಜರಿ ಬಗ್ಗೆ ಅಂದರೆ ದಿ. 23–04–2008 ಹಾಗೂ 1–5–2008 ರಿಂದ 15–5–2008ರ ವರೆಗೆ ಗೈರು ಹಾಜರಾದ ಬಗ್ಗೆ ವಿವರಣೆ ಕೇಳಲಾಗಿತ್ತು.

**46. ನಿ.ಪಿ.19 ರಲ್ಲಿ** ಆಪಾದಿತರ ಗೈರು ಹಾಜರಿಯನ್ನು ಹಾಜರಾತಿ ಪುಸ್ತಕದ ನಕಲಿನಲ್ಲಿ ಕಾಣಬಹುದು. ಕಛೇರಿಯ ಮುಖ್ಯಸ್ಥರು ಗೈರು ಹಾಜರಿ ಗುರುತು ಹಾಕಿದ್ದಾರೆ.

**47. ನಿ.ಪಿ.20** ದಿ. 20–05–2008 ರಂದು ರಾಮನಗರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು ಕೇಂದ್ರದ ನಿರ್ದೇಶಕರಿಗೆ ಕಛೇರಿಯ ಅಲಮೇರಾ ಮತ್ತು ಮೇಜಿನ ಒಳಗಡೆ ಆಪಾದಿತರ ಸ್ವಾಧೀನವಿದ್ದ ದಾಖಲೆಗಳನ್ನು ಸ್ವಾಧೀನಪಡಿಸಿಕೊಂಡ ಬಗ್ಗೆ ವರದಿಮಾಡಿದ್ದಾರೆ. ಅದಕ್ಕೆ ಕಛೇರಿಯವರು ಸಹಿ ಮಾಡಿದ್ದನ್ನು ತೋರಿಸಿದ್ದಾರೆ.

**48. ನಿ.ಪಿ.21** ರಲ್ಲಿ ಚೆಕ್ ಪುಸ್ತಕದ ನಕಲಿನಲ್ಲಿ ದಿ. 15–03–2008 ರ ಚೆಕ್ ಸಂಖ್ಯೆ 185493 ರಲ್ಲಿ ಕು. ಆರ್. ಜ್ಯೋತಿಗೆ ಬಿಲ್ಲಿನ ಪ್ರಕಾರ ರೂ. 34774/– ಗಳನ್ನು ಕೊಟ್ಟಿರುವುದಾಗಿ ನಮೂದು ಮಾಡಲಾಗಿದೆ.

**49. ನಿ.ಪಿ.22 ರಲ್ಲಿ** ಅಂದರೆ 22ಎ ರಲ್ಲಿ ರೂ. 34,774/– ಇದ್ದುದ್ದನ್ನು ತಿದ್ದುಪಡಿ ಮಾಡಿ ರೂ. 32774/– ಗಳು ಎಂದು ಬರೆದಿರುವುದನ್ನು ಗುರುತಿಸಲಾಗಿದೆ ಮತ್ತು ರೂ. 32,774/– ರ ಎದುರು ಕು. ಆರ್. ಜ್ಯೋತಿಯ ಸಹಿ ಇದೆ. ಕೆಳಗಡೆ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಸಹಿ ನಿ.ಪಿ.22ರ ಮೂಲ ಪ್ರತಿಯಲ್ಲಿ ಹಸಿರು ಬಣ್ಣದಲ್ಲಿ ಕಾಣುತ್ತಿದೆ, ಆದರೆ ಈ ಜೆರಾಕ್ಸ್ ಪ್ರತಿಯಲ್ಲಿ ಅವರ ಸಹಿ ಕಾಣಿಸುತ್ತಿಲ್ಲ.

**50. ನಿ.ಪಿ.23 ರಲ್ಲಿ** ನಗದು ಪುಸ್ತಕದಲ್ಲಿ ದಿ. 17–03–2008 ರಂದು ರೂ. 34774/– ಗಳನ್ನು ಖಜಾನೆಯಿಂದ ಪಡೆದು ಬಟವಾಡೆ ಆಗಿರುವುದನ್ನು ನಮೂದಿಸಲಾಗಿದೆ.

**51. ನಿ.ಪಿ.24** ರಲ್ಲಿ ದಿ. 27–05–2008 ರಂದು ಕು. ಆರ್. ಜ್ಯೋತಿಯು ತನಗೆ ರೂ. 34774/– ರಲ್ಲಿ ಬರೀ ರೂ. 32774/– ಗಳು ಮಾತ್ರ ಬಂದಿರುವುದಾಗಿ ಹಾಗೂ ತನಗೆ ರೂ. 2000/– ಗಳನ್ನು ದೊರಕಿಸಿಕೊಡಬೇಕು ಎಂದು ಬರೆದುಕೊಟ್ಟಿದ್ದಾರೆ.

**52. ನಿ.ಪಿ.25 ರಲ್ಲಿ** ರಾಮನಗರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು ಆಪಾದಿತರಿಂದ ಕು. ಆರ್. ಜ್ಯೋತಿರವರಿಗೆ ರೂ. 34774/– ಗಳು ಕೊಡುವ ಬದಲು ಬರೀ ರೂ. 32774/– ಗಳನ್ನು ಯಾವ ಕಾರಣದಿಂದ ಕೊಡಲಾಯಿತೆಂದು ವಿವರಣೆ ನೀಡಲು ಕೇಳಿಕೊಂಡಿದ್ದಾರೆ. ಅದರ ಜೊತೆಗೆ ಅಕ್ವಿಟೆನ್ಸ್ ರಿಜಿಸ್ಟರ್‌ನ ನಕಲು ಸಹಿತ ಆಪಾದಿತರಿಗೆ ತಿಳಿಸಲಾಗಿತ್ತು.

**53. ನಿ.ಪಿ.26** ಮಂಜು ಪಿ. ರವರು ದಿ. 26–06–2008 ರಂದು ಆಪಾದಿತರು ತನ್ನ ಸಂಬಳದಲ್ಲಿ ರೂ. 2500/– ಗಳನ್ನು ಡಿ.ಸಿ.ಪಿ.ಎಸ್.ಗೆಂದು ಅನಧಿಕೃತವಾಗಿ ಪಡೆದುದನ್ನು ಅವರ ಕೈಯಿಂದ ವಸೂಲು ಮಾಡಿ ಕೊಡಿಸಬೇಕಾಗಿ ರಾಮನಗರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳಿಗೆ ಬರೆದುಕೊಂಡಿದ್ದಾರೆ.

**54. ನಿ.ಪಿ.27 ರಲ್ಲಿ** ದಿ. 30–06–2008 ರಂದು ರಾಮನಗರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು ಆಪಾದಿತರಿಗೆ ಅಕ್ರಮವಾಗಿ ಪಡೆದುಕೊಂಡ ರೂ. 5600/– ಹಾಗೂ 2500/– ಗಳ ಬಗ್ಗೆ ವಿವರಣೆ ಕೇಳಿದ ಪತ್ರದ ನಕಲನ್ನು ಕೇಂದ್ರ ನಿರ್ದೇಶನಾಲಯಕ್ಕೆ ಕಳುಹಿಸಿದ್ದಾರೆ. ಜೊತೆಗೆ ಶ್ರೀಮತಿ ವೀಣಾ ಕುಲಕರ್ಣಿ ಬರೆದುಕೊಟ್ಟ ಕಾಗದ ಕುರಿತು ಆಪಾದಿತರಿಗೆ ತಿಳಿಸಲಾಗಿದೆ.

**55. ನಿ.ಪಿ.28 ರಲ್ಲಿ** ದಿ. 05–10–2007 ರಂದು ನಿರ್ದೇಶಕರು ಆಪಾದಿತರಿಗೆ ಅವರು ಮಾಡಿದ ಬೇರೆ ಬೇರೆ ತಪ್ಪನ್ನು ತೋರಿಸಿಕೊಟ್ಟು ಅವರ ಮೇಲೆ ಶಿಸ್ತು ಕ್ರಮ ಏಕೆ ತೆಗೆದುಕೊಳ್ಳಬಾರದೆಂದು ಕಾರಣ ಕೇಳಿಕೊಂಡಿದ್ದಾರೆ.

**56. ನಿ.ಪಿ.29** ದಿ. 27–10–2007 ರಂದು ಆಪಾದಿತರು ನಿ.ಪಿ.28 ಕ್ಕೆ ನೀಡಿದ ಉತ್ತರದ ನಕಲು.

**57. ನಿ.ಪಿ.30 ರಲ್ಲಿ** ದಿ. 22–11–2007 ರಂದು ನಿರ್ದೇಶಕರು ಆಪಾದಿತರು ತನ್ನ ಪತ್ರದಲ್ಲಿ ಆತ್ಮಹತ್ಯೆ ಮಾಡಿಕೊಳ್ಳುತ್ತೇನೆ ಎಂದು ಬರೆದ ವಿಷಯದಲ್ಲಿ ಆಪಾದಿತರು ದಸ್ತಗಿರಿ ಮಾಡಬಹುದಾದ ಅಪರಾಧ ಎಸಗಿರುವರೆಂದು ತಿಳಿಸಿರುತ್ತಾರೆ.

**58.** ಮೊದಲಿನ ಆರೋಪ ಅಂದರೆ ನಿ.ಪಿ.4 ಆಪಾದಿತರು ತಾನು ಬೆಳಿಗ್ಗೆ 9.45ಕ್ಕೆ ಬಂದಾಗ ಬೇರೆ ಪತ್ರಗಳೊಂದಿಗೆ ನಿ.ಪಿ.4 ನೋಡದೆ ಸಹಿ ಮಾಡಿದ್ದೇನೆ ಎಂದು ಆಪಾದಿತರ ಮೇಲಾಧಿಕಾರಿ ನನ್ನ ಮುಂದೆ ಸ್ಪಷ್ಟವಾಗಿ ಹೇಳಿರುತ್ತಾರೆ.

**59.** ಮಂಡನಾಧಿಕಾರಿಯು ವಿಚಾರಣೆ ಪ್ರಾರಂಭಿಸುವ ಮೊದಲು ಆರೋಪಣಾ ಪಟ್ಟಿಯ 3ನೇ ಅನುಬಂಧದಲ್ಲಿರುವ ದಾಖಲೆಗಳನ್ನು ಆಪಾದಿತರಿಗೆ ಕೊಟ್ಟು ಸ್ವೀಕೃತಿ ಪಡೆದಿದ್ದಾರೆ ಅಲ್ಲದೆ ಪ್ರಾಥಮಿಕ ಹೇಳಿಕೆಯಲ್ಲಿ ನನ್ನ ಮುಂದೆ ಎಲ್ಲಾ ದಾಖಲೆಗಳು ಬಂದಿರುತ್ತದೆ ಎಂದು ದಿನಾಂಕ:18.04.2009ರಂದು ಒಪ್ಪಿಕೊಂಡಿದ್ದಾರೆ. ಆಮೇಲೆ ಸಾಕ್ಷಿ ವಿಚಾರಣೆ ಪ್ರಾರಂಭವಾಗಿದೆ. ಆ ದಾಖಲೆಗಳಲ್ಲದೆ ಬೇರೆ ಯಾವುದೇ ದಾಖಲೆಗಳನ್ನು ಸ್ಪಷ್ಟವಾಗಿ ತಾರೀಖು ಮತ್ತು ವಿವರ ನೀಡಿ ಆಪಾದಿತರು ಕೇಳಿಕೊಂಡಿಲ್ಲ. ಆದ್ದರಿಂದ ಆಪಾದಿತರಿಗೆ ಎಲ್ಲಾ ದಾಖಲೆಗಳನ್ನು ಒದಗಿಸಿಲ್ಲ ಎನ್ನುವುದು ವಸ್ತು ಸ್ಥಿತಿ ಅಲ್ಲ. ತನ್ನ ಜವಾಬ್ದಾರಿಯನ್ನು ತಪ್ಪಿಸಲು ಹಾಗೂ ಇಲಾಖಾ ವಿಚಾರಣೆಯನ್ನು ಮುಂದುವರಿಸಲು ಉಪಯೋಗಿಸಿದ ನೆವನವಾಗಿರುತ್ತದೆ ಎಂಬುದು ನನ್ನ ಅಭಿಪ್ರಾಯ.

**60. ಆರೋಪ 1 –** ಸರ್ಕಾರಿ ಸಾಕ್ಷಿ ಸಂಖ್ಯೆ 1 ಶ್ರೀ ಬಿ. ಶ್ರೀನಿವಾಸಾಚಾರ್ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು ಅವರು ಆಪಾದಿತರ ವಿರುದ್ಧವಾಗಿ ಸುಳ್ಳು ಸಾಕ್ಷಿ ಹೇಳುವ ದ್ವೇಷ ಅಥವಾ ವೈಯಕ್ತಿಕ ಕಾರಣಗಳನ್ನು ಪಾಟೀ ಸವಾಲು ಸಮಯ ತೋರಿಸಿಕೊಟ್ಟಿಲ್ಲ. ಆಪಾದಿತರ ಮೇಲೆ ಬೇರೆ ಬೇರೆ ಅವರ ತಪ್ಪುಗಳನ್ನು ತೋರಿಸಿ ಗೈರು ಹಾಜರಾಗಿ ಕಛೇರಿಯ ಕೆಲಸಕಾರ್ಯಗಳಿಗೆ ತೊಂದರೆ ಆಗಿರುವುದನ್ನು ಬರೆದಿರುವಾಗ ಅವರೇ ನಿಪಿ4 ತಿಳಿದು ಸಹಿ ಮಾಡುವ ಸಂದರ್ಭ ಇರಲಾರದು ಎಂದು ನಾನು ಹೇಳುತ್ತೇನೆ. ಮೊದಲಿನಿಂದಲೇ ಕೆಲಸ ಮಾಡುತ್ತಿದ್ದ ಕೆಳದರ್ಜೆ ನೌಕರನನ್ನು ನಂಬಿ ದಿನಾಲು ಸಹಿ ಹಾಕುವಂತೆ, ಅದಲ್ಲದೆ ಬೇರೆ ಪತ್ರಗಳೊಂದಿಗೆ ಅದನ್ನು ಇಟ್ಟು ಮೋಸದಿಂದ ಸಹಿ ತೆಗೆದುಕೊಂಡಿರುವುದು 1ನೇ ಸಾಕ್ಷಿ ಹೇಳಿಕೆಯಿಂದ ವ್ಯಕ್ತವಾಗಿದೆ. ಆಪಾದಿತರ ಬಗ್ಗೆ ಶಿಫಾರಸ್ಸು ಮಾಡಿ ಅವರನ್ನು ತಮ್ಮ ಕಛೇರಿಯಿಂದ ವರ್ಗ ಮಾಡಬಾರದೆಂದು ಸಾಮಾನ್ಯ ಅಧಿಕಾರಿ ಯಾರೂ ಬರೆಯುವಷ್ಟು ನಂಬಿಕೆಯನ್ನು ಆಪಾದಿತರು ತನ್ನ ಕೆಲಸಕಾರ್ಯಗಳಲ್ಲಿ ತೋರಿಸಿಕೊಟ್ಟಿಲ್ಲ. ಶ್ರೀ ಬಿ. ಶ್ರೀನಿವಾಸಾಚಾರ್ ನನ್ನ ಮುಂದೆ ತಾನು ನಿರ್ದೇಶಕರಿಗೂ ಕ್ಷಮಾಪಣೆ ಕೇಳಿ ಪತ್ರ ಬರೆದಿರುವುದನ್ನು ಹೇಳಿಕೊಂಡಿದ್ದಾರೆ. ಆ ಪತ್ರವನ್ನು ಈ ಇಲಾಖಾ ವಿಚಾರಣೆಯಲ್ಲಿ ಗುರುತಿಸಲಾಗಿದೆ. ಆದ್ದರಿಂದ ಆಪಾದಿತರು ಹೇಳುವಂತೆ 1ನೇ ಆರೋಪ ಸಾಬೀತು ಆಗಿಲ್ಲವೆಂದು ಹೇಳುವುದು ಸಮಂಜಸವಲ್ಲ.

**61.** ಸರ್ಕಾರಿ ನೌಕರನು 1966ನೇ ಇಸವಿಯ ಸರ್ಕಾರಿ ನೌಕರರ ನಡತೆಯ ನಿಯಮಾವಳಿ 3 ರಂತೆ ನಂಬಿಕೆಯನ್ನು ಇಟ್ಟುಕೊಳ್ಳುವುದು ಮುಖ್ಯ ಕರ್ತವ್ಯ. ಜುಲೈ ತಿಂಗಳಲ್ಲಿ ಆ ರೀತಿ ಬರೆಯಬೇಕಾದರೆ ಸರ್ಕಾರದ ಸಾಮಾನ್ಯ ಅಧಿಕಾರಿ ಆ ರೀತಿ ಬರೆಯುವ ಸಂದರ್ಭ ರಹಸ್ಯ ವರದಿಯಲ್ಲಿ ಮಾತ್ರ ಬರೆಯುವುದಾಗಿದೆ. ಆಪಾದಿತರ ಮೇಲೆ ಹಲವಾರು ಆರೋಪಗಳು ಇರುವ ಸಂದರ್ಭದಲ್ಲಿ ಯಾವುದೇ ಅಧಿಕಾರಿಯು ಆರೋಪ 1 ರಲ್ಲಿ ಬರೆದಂತೆ ಶಿಫಾರಸ್ಸು ಮಾಡುವುದು ಅಸಾಧ್ಯವಾಗಿರುತ್ತದೆ. ಆದ್ದರಿಂದ ಆಪಾದಿತ ನಂಬಿಕೆಗೆ ದ್ರೋಹ ಮಾಡಿರುವುದು ಸಾಬೀತಾಗಿದೆ. ಆಪಾದಿತರು ತನ್ನ ಕೆಲಸದಲ್ಲಿ ದಕ್ಷತೆಯನ್ನು ತೋರಿಸಿಲ್ಲ. ಆ ಪತ್ರಕ್ಕೆ ಸಹಿ ತೆಗೆದುಕೊಳ್ಳುವ ಮೊದಲು ಒಂದು ಕಡತ ಪ್ರಾರಂಭ ಮಾಡಿ ಕರಡು ಪ್ರತಿಗೆ ಸಹಿ ತೆಗೆದುಕೊಳ್ಳಲಿಲ್ಲ. ಆದ್ದರಿಂದ ಆಪಾದಿತರು ಸರ್ಕಾರಿ ನೌಕರನಿಗೆ ತರವಲ್ಲದ ರೀತಿಯಲ್ಲಿ ಕಾರ್ಯವೆಸಗಿದ್ದು ಸಾಬೀತಾಗಿದೆ ಎಂದು ನನ್ನ ಅಭಿಪ್ರಾಯ.

**62. ಆರೋಪ 2 ಮತ್ತು 3 –** ದಿ. 31–1–2008 ರಂದು ಆಪಾದಿತರು ಬೆಂಗಳೂರು ಗ್ರಾಮಾಂತರ ಜಿಲ್ಲೆಯಿಂದ ರಾಮನಗರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿಗೆ ವರ್ಗವಾಗಿ ಬಿಡುಗಡೆಗೊಳಿಸಿಟ್ಟರೂ ತನ್ನ ಸ್ವಾಧೀನವಿದ್ದ ಕಪಾಟಿನ ಬೀಗದ ಕೈ ಕೊಡದೆ ನಿರ್ಲಕ್ಷತೆ ತೋರಿಸಿದ್ದು ದಾಖಲೆಗಳಿಂದ ಮತ್ತು ಸಾಕ್ಷಿಗಳ ಹೇಳಿಕೆಗಳಿಂದ ಸಾಬೀತಾಗಿದೆ. ಸುಮಾರು 4 ತಿಂಗಳು ಕಳೆದರೂ ಪೂರ್ತಿ ಪ್ರಭಾರೆ ನೀಡದೆ ಆಪಾದಿತರು

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿಯಲ್ಲಿ ಅಧಿಕಾರಿಗಳಿಗೂ, ಉಳಿದ ನೌಕರರಿಗೂ ಸಾಕಷ್ಟು ತೊಂದರೆಗಳನ್ನು ಮಾಡಿದ್ದು ಕಂಡುಬರುತ್ತದೆ. ದಿ. 23-5-2008 ರಂದು ಕಪಾಟು ಒಡೆದಾಗ 141 ದಾಖಲೆಗಳು ಅದರಲ್ಲಿಯೂ ಸೇವಾ ಪುಸ್ತಕಗಳು ಮತ್ತಿತರ ಮುಖ್ಯ ದಾಖಲೆಗಳು ಸಿಕ್ಕಿರುವುದು ಆ ದಿನ ತಯಾರಿಸಿದ ಪಟ್ಟಿಯಿಂದ ವ್ಯಕ್ತವಾಗುತ್ತದೆ. ಆದ್ದರಿಂದ ಆರೋಪದಲ್ಲಿ ತೋರಿಸಿದಂತೆ ಆಪಾದಿತರು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು 1966ರ ನಿಯಮ 3 ನ್ನು ಸ್ಪಷ್ಟವಾಗಿ ಉಲ್ಲಂಘಿಸಿ ಸರ್ಕಾರಿ ನೌಕರನಿಗೆ ಸಲ್ಲದ ರೀತಿಯಲ್ಲಿ ವರ್ತಿಸಿರುವುದು ದಾಖಲೆಗಳಿಂದ ಮತ್ತು ಸಾಕ್ಷಿಗಳ ಹೇಳಿಕೆಯಿಂದ ಸಾಬೀತಾಗಿದೆ.

**63.** ನಿ.ಪಿ.16 ಆಪಾದಿತರಿಗೆ 19-05-2008 ರಂದು ನೀಡಿದ ಆಜ್ಞೆ ತನಗೆ ತಲುಪಿಲ್ಲ ಮತ್ತು ಅದು ದಿ. 02-06-2008 ರಂದು ಮಾತ್ರ ರಿಜಿಸ್ಟರ್ ಅಂಚೆ ಮೂಲಕವಾಗಿ ತನಗೆ ಜಾರಿಗೊಳಿಸಲಾಗಿದೆ. ಈ ಬಗ್ಗೆ ಆಪಾದಿತ ಯಾವುದೇ ದಾಖಲೆ ಹಾಜರು ಮಾಡಿಲ್ಲ ಮತ್ತು ಲಿಖಿತವಾದದಲ್ಲಿ ಮಾತ್ರ ಬರೆದಿರುವುದು ಕಂಡುಬರುತ್ತದೆ. ಸರ್ಕಾರಿ ದಾಖಲೆಗಳ ಯಾವುದೇ ಪತ್ರ ಯಾ ಸ್ವೀಕೃತದ ಮೇಲೆ ಅವಲಂಬಿಸಿದ್ದು ಕಂಡುಬರುವುದಿಲ್ಲ. ನಿ.ಪಿ.16 ಆಪಾದಿತರಿಗೆ ಜಾರಿ ಆಗದಿದ್ದರೂ ಆಪಾದಿತರು 2008 ಜನವರಿಯಲ್ಲೇ ಪೂರ್ತಿ ಪ್ರಭಾರೆಯನ್ನು ಕೊಡುವುದು ಅವರ ಆದ್ಯ ಕರ್ತವ್ಯವಾಗಿತ್ತು. ಇಲಾಖೆಯ ಮುಖ್ಯಸ್ಥರು ಕೀಲಿ ಕೈಗಳ 2ನೇ ಪ್ರತಿ ಉಪಯೋಗಿಸಿ ಕಪಾಟು ತೆರೆಯಬಹುದಿತ್ತು ಎಂಬ ವಾದದಲ್ಲಿ ಹುರುಳಿಲ್ಲ. ಗ್ರಾಮಾಂತರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು ಆ ರೀತಿ ತನ್ನ ಸ್ವಾಧೀನ ಕೀಲಿ ಕೈಗಳ 2ನೇ ಪ್ರತಿ ಇರುವುದಾಗಿ ಒಪ್ಪಿಕೊಂಡಿಲ್ಲ ಮತ್ತು ಅವರ ಸ್ವಾಧೀನ ಆಪಾದಿತರು ಅವರ ಜಾಗದಲ್ಲಿ ಮೊದಲು ಕೆಲಸ ಮಾಡುತ್ತಿದ್ದ ಅಧಿಕಾರಿಯು ಕೊಟ್ಟಿರುವುದನ್ನು ತೋರಿಸುವ ದಾಖಲೆ ಇರುವುದಿಲ್ಲ. ಆಪಾದಿತರು ಮತ್ತೂ ಮುಂದುವರಿಸಿ ತನಗೆ ಗ್ರಾಮಾಂತರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿಗೆ ಬಂದಾಗ ಯಾರೂ ಪ್ರಭಾರೆ ನೀಡಿಲ್ಲ. ಆದ್ದರಿಂದ ನಾನು ಆ ಕಛೇರಿಯಿಂದ ವರ್ಗವಾಗಿ ರಾಮನಗರ ಜಿಲ್ಲೆಗೆ ಹೋಗುವಾಗ ಪ್ರಭಾರೆ ನೀಡುವ ಸಂದರ್ಭ ಇಲ್ಲವೆಂದು ವಾದಿಸಿದರು. ಮೊದಲಿನವರು ಮಾಡಿದ ತಪ್ಪನ್ನು ಕಛೇರಿಯಲ್ಲಿ ಪುನ: ಪುನ: ಮಾಡುತ್ತಿರುವುದರಿಂದ ಆಪಾದಿತರು ಬೆಂಗಳೂರು ಗ್ರಾಮಾಂತರ ಜಿಲ್ಲೆಯಿಂದ ರಾಮನಗರ ಜಿಲ್ಲೆಗೆ ಹೋದಾಗ ಪ್ರಭಾರೆ ಕೊಡದಿರುವುದು ಸರಿಯೆಂದು ಸಾಧಿಸುವುದು ಸಮಂಜಸವಲ್ಲ. ಇದು ಆಪಾದಿತರ ಬೇಜವಾಬ್ದಾರಿಯನ್ನು ಮತ್ತು ಕೆಲಸದಲ್ಲಿರುವ ನಿರ್ಲಕ್ಷತೆಯನ್ನು ತೋರಿಸುತ್ತದೆ. ಆದ್ದರಿಂದ ಆಪಾದಿತರು ನನ್ನ ಮುಂದೆ ಆರೋಪವನ್ನು ನಿರಾಕರಿಸಲು ಪ್ರಯತ್ನಿಸಿದ್ದು ಸಫಲವಾಗಿಲ್ಲ. ಅದು ಅವರ ಬೇಜವಾಬ್ದಾರಿಯನ್ನು ಸ್ಪಷ್ಟವಾಗಿ ತೋರಿಸುತ್ತದೆ. ತನ್ನ ತಪ್ಪನ್ನು ಮರೆಮಾಚಲು ಯಾವುದೇ ತರಹದ ಕುಂಟುನೆಪ ನೀಡಲು ತಯಾರು ಇರುವವರೆಂದು ಸ್ಪಷ್ಟವಾಗುತ್ತದೆ. ಆದ್ದರಿಂದ ಆರೋಪಗಳು 2 ಮತ್ತು 3 ಸಾಬೀತಾಗಿರುತ್ತದೆ.

**64. ಆರೋಪ 4 –** ಸರ್ಕಾರಿ ಸಾಕ್ಷಿ 6, 7 ಮತ್ತು 8 ರ ಹೇಳಿಕೆಯಿಂದ ಮತ್ತು ದಾಖಲೆಗಳಿಂದ ಆಪಾದಿತರು ಕು. ಆರ್. ಜ್ಯೋತಿ ರವರಿಗೆ ಅವರಿಗೆ ಫೆಬ್ರವರಿಯಿಂದ ಮೇ ವರೆಗೆ ಸಲ್ಲಬೇಕಾದ ರೂ. 34774/- ಗಳ ವೇತನದಲ್ಲಿ ರೂ. 2000/- ಗಳನ್ನು ಕಡಿಮೆ ಕೊಟ್ಟಿದ್ದು ಸ್ಪಷ್ಟವಾಗಿ ನನ್ನ ಮುಂದೆ ಸಾಬೀತಾಗಿದೆ. ಆಪಾದಿತರಿಗೆ ವೇತನ ಹಂಚುವ ಕೆಲಸ ನಿರ್ವಹಿಸಿದ ದಾಖಲೆಗಳು ಹಂಚಿಕೆ ದಾಖಲೆಗಳನ್ನು ಹಾಜರುಪಡಿಸಿಲ್ಲ, ಆದಕಾರಣ ಅದು ಸಾಬೀತಾಗಿಲ್ಲ ಎಂಬುದು ನಂಬುವಂತ ವಿಷಯವಲ್ಲ. ಬಿಲ್ಲು ಕಳುಹಿಸುವುದು ಮತ್ತು ನಗದು ಪುಸ್ತಕ ಹಾಗೂ ನಗದನ್ನು ಅವರೇ ಇಟ್ಟುಕೊಂಡಿರುವುದು ಸಾಬೀತಾಗಿರುವುದರಿಂದ ಕೆಲಸದ ಹಂಚಿಕೆಯ ದಾಖಲೆಗಳು ಇಲ್ಲದಿದ್ದರೂ ಸಾಕ್ಷಿಗಳ ಹೇಳಿದ ಮಾತನ್ನು ನಂಬದಿರಲು ಸಾಧ್ಯವಿಲ್ಲ. ನಿಪಿ 23 ನಗದು ಪುಸ್ತಕದಲ್ಲಿ ರೂ. 34774/- ಗಳು ಪಾವತಿಯಾಗಿರುವುದು ಕಂಡುಬಂದರೂ ನಿ.ಪಿ.22ರ ವೇತನ ಪುಸ್ತಕದಲ್ಲಿ ಆಪಾದಿತರ ಕೈ ಬರಹದಲ್ಲಿ ರೂ. 32774/- ಮಾತ್ರ ಕು. ಆರ್. ಜ್ಯೋತಿಗೆ ಕೊಟ್ಟಿರುವುದು ಕಂಡುಬರುವುದರಿಂದ ನಗದು ಪುಸ್ತಕದ ನಿ.ಪಿ.23 ಆಧಾರದ ಮೇಲೆ ಮಾತ್ರ ನಂಬಲು ಸಾಧ್ಯವಿಲ್ಲ. ಎಲ್ಲಾ ದಾಖಲೆಗಳನ್ನು ಕೂಲಂಕುಷವಾಗಿ ನೋಡುವಾಗ ಆಪಾದಿತರು ತಪ್ಪು ಎಸಗಿದ್ದು ಸಾಬೀತಾಗಿದೆ. ಸತ್ಯ ಹೊರಗೆ ಬಂದಿದೆ. ಮತ್ತು ವಾದ ಮಾಡಿ ಮೂರು ತಿಂಗಳು ಕಳೆದು ದೂರು ನೀಡಿದ್ದಾರೆ ಆದ್ದರಿಂದ ಸಾಕ್ಷಿಯನ್ನು ನಂಬಬಾರದೆಂದು ವಾದಿಸಿದರು. 3 ತಿಂಗಳೂ ಕಳೆದು ದೂರು ನೀಡಿದ ಕಾರಣದಿಂದ ಸಾಕ್ಷಿಯನ್ನು ನಂಬದಿರಲು ಆಗುವುದಿಲ್ಲ. ಆ ಸಾಕ್ಷಿಯು ಬೇರೆಯವರ ಪ್ರಚೋದನೆಯಿಂದ ಆಪಾದಿತರ ಮೇಲೆ ಸುಳ್ಳು ಹೇಳಿರುವುದು ಅಸಾಧ್ಯ. ಆಪಾದಿತರು ಮತ್ತೂ ಮುಂದುವರಿಸಿ ಎಷ್ಟು ರೂಪಾಯಿಯ ಎಷ್ಟು ನೋಟುಗಳನ್ನು ನೀಡಿದ ವಿವರ ಸಾಕ್ಷಿಗೆ ಹೇಳಲಾಗದ ಕಾರಣ 2010 ರಲ್ಲಿ ನೀಡಿದ ಸಾಕ್ಷಿಯನ್ನು ನಂಬದಿರಲು ಆಗುವುದಿಲ್ಲ. ಕಡಿಮೆ ನೋಟುಗಳನ್ನು ಕೊಟ್ಟಿರುವಾಗ ಮತ್ತು ವೇತನ ಪುಸ್ತಕದಲ್ಲಿ ಆಪಾದಿತರೇ ಬರೆದಿರುವಾಗ ಈ ವಿಷಯಕ್ಕೆ ಯಾವುದೇ ಬೆಲೆ ಕೊಡಲಾಗುವುದಿಲ್ಲ. ನಿ.ಪಿ.22 ರಲ್ಲಿ ತಾನು ಗ್ರಾಮಾಂತರ ಜಿಲ್ಲೆಯಿಂದ ಬಿಟ್ಟು ಹೋದ ಮೇಲೆ ತಿದ್ದುಪಡಿ ಮಾಡಿದ್ದು ಕಂಡುಬರುತ್ತದೆ ಎಂದು ವಾದಿಸಿದರು. ಈ ವಿಷಯ ಸಾಕ್ಷಿಯ ಪಾಟೀ ಸವಾಲು ಸಮಯ ತೋರಿಸಿಕೊಟ್ಟಿಲ್ಲ. ಆದ್ದರಿಂದ ಆ ವಿಷಯ ಸುಳ್ಳು ಸಾಧಿಸಲು ಉಪಯೋಗಿಸಿದ ನೆಪವಾಗಿರುತ್ತದೆ.

**65.** ಕರ್ನಾಟಕ ಆರ್ಥಿಕ ವಿಧಿಯ 327 ಮತ್ತು 348ಎ ರಲ್ಲಿದ್ದಂತೆ ದೃಢೀಕರಿಸುವ ಜವಾಬ್ದಾರಿ ಕಛೇರಿ ಅಧಿಕಾರಿಗಳಿಗೆ ಇದ್ದರೂ ಮೂಲ ದಾಖಲೆಗಳಿಂದ ಮತ್ತು ಸಾಕ್ಷಿ ಹೇಳಿಕೆಗಳಿಂದ ಆಪಾದಿತರು ತಪ್ಪು ಮಾಡಿರುವುದು ನನ್ನ ಮುಂದೆ ಸ್ಪಷ್ಟವಾಗಿದೆ. ಆಪಾದಿತರ ವಾದ ನಿರಾಧಾರ ಮತ್ತು ಅವರೇ ಸೃಷ್ಟಿ ಮಾಡಿದ ವಾದವಾಗಿರುತ್ತದೆ. ಇದನ್ನು ಒಪ್ಪಲು ನಾನು ತಯಾರಿಲ್ಲ. ಆದ್ದರಿಂದ ಆರೋಪ 4 ನನ್ನ ಮುಂದೆ ಸಾಬೀತಾಗಿದೆ.

**66. ಆರೋಪ 5 –** ಆಪಾದಿತರು ದಿ. 01-12-2006 ರಿಂದ ಹೊಸಕೋಟೆ ತಾಲ್ಲೂಕು ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುವಾಗ ಶ್ರೀಮತಿ ವೀಣಾ ಕುಲಕರ್ಣಿ, ಗಣತಿದಾರರಿಂದ ರೂ. 5600/- ಗಳನ್ನು ಮೋಸದಿಂದ ಪಡೆದಿರುವುದು ಮತ್ತು ಸಹೋದ್ಯೋಗಿಗೆ ಅನ್ಯಾಯ ಮಾಡಿರುವುದು ಸ್ಪಷ್ಟವಾಗಿದೆ. ಆಪಾದಿತರ ದುರ್ನಡತೆಯು ಆರೋಪದಲ್ಲಿ ಬರೆದಂತೆ ಸಾಬೀತಾಗಿದೆ.

**67.** ಈ ಆರೋಪ ಸ್ಪಷ್ಟವಾಗಿಲ್ಲ ಎಂದು ಆಪಾದಿತರಿಂದ ದೂರಲಾಗಿದೆ. ಆರೋಪಣಾ ವಿವರಣೆಯನ್ನು (2ನೇ ಅನುಬಂಧ) ಹಾಗೂ ಈ ಆರೋಪಣೆಯನ್ನು ನೋಡುವಾಗ ಆಪಾದಿತರು ಮೋಸದಿಂದ ಶ್ರೀಮತಿ ವೀಣಾ ಕುಲಕರ್ಣಿಯಿಂದ ರೂ. 5600/- ಗಳನ್ನು ಪಡೆದಿರುವುದು ಸ್ಪಷ್ಟವಾಗಿದೆ

ಮತ್ತು ಆಪಾದಿತರು ಆಪಾದನೆಯ ಒಕ್ಕಣೆಯಿಂದ ಅರ್ಥವಾಗದೇ ಇರುವ ಸಂದರ್ಭ ಆಗಿಲ್ಲ. ರೂ. 5600/– ಗಳನ್ನು ಕೆಳಗಿನ ತರಗತಿಯ ಸರ್ಕಾರಿ ನೌಕರನಿಗೆ ಚಿಕ್ಕ ಹಣವಲ್ಲ. 2 ತಿಂಗಳ ನಂತರ ದೂರು ನೀಡಿದರೂ ಸುಳ್ಳು ದೂರು ಎಂದು ಶ್ರೀಮತಿ ವೀಣಾ ಕುಲಕರ್ಣಿಯವರ ಹೇಳಿಕೆಯನ್ನು ಕಡೆಗಣಿಸುವುದು ಸಮಂಜಸವಲ್ಲ. ಆಪಾದಿತರು ಡಿ.ಸಿ.ಪಿ.ಎಸ್. ಬಗ್ಗೆ ಎಂದು ಸುಳ್ಳು ಹೇಳಿ ಶ್ರೀಮತಿ ವೀಣಾ ಕುಲಕರ್ಣಿಯವರಿಂದ ಹಣ ಪಡೆದಿರುವುದು ದಾಖಲೆಗಳಿಂದ ಮತ್ತು ಪ್ರಮಾಣ ಪೂರ್ವಕ ನೀಡಿದ ಹೇಳಿಕೆಗಳಿಂದ ಸ್ಪಷ್ಟವಾಗಿದೆ. ಆಪಾದಿತರು ಹೇಳುವಂತೆ ಕುರುವಿಲ್ಲದ ಆಪಾದನೆಯೂ ಅಲ್ಲ. ಕಡೆಗಣಿಸುವ ವಿಷಯವೂ ಅಲ್ಲ. ಶ್ರೀಮತಿ ವೀಣಾ ಕುಲಕರ್ಣಿ ಆಪಾದಿತರ ಮೇಲೆ ಸುಳ್ಳು ದೂರು ನೀಡುವ ಮಹಿಳೆ ಎಂಬುದನ್ನು ಪಾಟೀ ಸವಾಲು ಯಾ ಆಪಾದಿತರು ತನ್ನ ಲಿಖಿತ ವಾದದಲ್ಲಿ ತೋರಿಸಿಕೊಟ್ಟಿಲ್ಲ. ಆದ್ದರಿಂದ ಈ ಆರೋಪವು ಸಂಪೂರ್ಣವಾಗಿ ಸಾಬೀತಾಗಿದೆ.

**68. ಆರೋಪ 6 –** ಈ ಆರೋಪದಲ್ಲಿ ರೂ. 2500/– ಗಳನ್ನು ಆಪಾದಿತರು ಕು. ಪಿ. ಮಂಜು, ಗಣತಿದಾರಳಿಗೆ ಕೊಡದಿರುವುದು ದಾಖಲೆಗಳಿಂದ ಮತ್ತು ಬಾಯಿದೆರೆ ಹೇಳಿಕೆಯಿಂದ ಸ್ಪಷ್ಟವಾಗಿ ನನ್ನ ಮುಂದೆ ಸಾಕ್ಷಿ ಸಂಖ್ಯೆ 9 ಮತ್ತು ನಿಪಿ 26 ಮತ್ತು ನಿಪಿ 27 ರಿಂದ ಸಾಬೀತಾಗಿದೆ. ಆಮೇಲೆ ಆಪಾದಿತರು ರೂ. 2200/– ಗಳನ್ನು ಸಾಕ್ಷಿಗೆ ಕೊಟ್ಟಿದ್ದರೂ ಅದು ಆರೋಪ ಹೊರಿಸಿದ ಮೇಲೆ ಇರಬೇಕು. 2 ವರ್ಷಗಳ ನಂತರ ರೂ. 2500/– ಆಪಾದಿತರು ಸಾಕ್ಷಿ ಕು. ಪಿ. ಮಂಜುಗೆ ಕೊಟ್ಟಿದ್ದರೂ ಆಪಾದಿತರು 2008 ರಲ್ಲಿ ತಪ್ಪು ಮಾಡಿಲ್ಲ ಎಂದು ಹೇಳಲು ಸಾಧ್ಯವಿಲ್ಲ. ಆ ಸಾಕ್ಷಿಯು ಬೇರೆಯವರ ಪ್ರಚೋದನೆಗೆ ಬಿದ್ದು ಸುಳ್ಳು ದೂರು ಯಾ ಸುಳ್ಳು ಹೇಳಿಕೆ ನೀಡಿರುವುದು ಯಾವುದೇ ರೀತಿಯಲ್ಲಿ ಕಂಡುಬರುವುದಿಲ್ಲ.

**69. ಆರೋಪ 7** – ಸರ್ಕಾರಿ ಸಾಕ್ಷಿ ಸಂಖ್ಯೆ 8 ಶ್ರೀ ಎಸ್. ಸುದರ್ಶನ್ ರವರು ನನ್ನ ಮುಂದೆ ಆಪಾದಿತರು ದಿ. 01–05–2008 ರಿಂದ 30–06–2008ರ ವರೆಗೆ ಕಛೇರಿಗೆ ಬಂದಿಲ್ಲ ಮತ್ತು ಹಾಜರಿ ಪುಸ್ತಕದಲ್ಲಿ ಆ 2 ತಿಂಗಳಲ್ಲಿ ಆಪಾದಿತರ ಹೆಸರಿನ ಎದುರಲ್ಲಿ ತಪ್ಪು ಗುರುತು ಹಾಕಿ ಆಪಾದಿತರು ಬಾರದಿರುವುದನ್ನು ಹಾಜರಿ ಪುಸ್ತಕ ಹಾಗೂ ತನ್ನ ಹೇಳಿಕೆಯಿಂದ ಸಾಬೀತುಪಡಿಸಿದ್ದಾರೆ. ಹಾಜರಿ ಪುಸ್ತಕದಲ್ಲಿ ಬೇರೆ ಯಾವುದೇ ರೀತಿಯ ಬರಹ ಅಗತ್ಯವಿಲ್ಲ. ಕಛೇರಿಯ ಅಧಿಕಾರಿ ಹಾಜರಿ ಪುಸ್ತಕದಲ್ಲಿ ಗುರುತಿಸಿರುವುದು ಸಾಕು. ಆಪಾದಿತರ ಆ ಸಮಯದಲ್ಲಿ ಆ 2 ತಿಂಗಳ ಅವಧಿಯಲ್ಲಿ ಯಾವ ಕಛೇರಿಯಲ್ಲಿ ಏನು ಕೆಲಸ ಮಾಡುತ್ತಿದ್ದನೆಂದು ತೋರಿಸಿಕೊಟ್ಟಿಲ್ಲ ಮತ್ತು ರಜೆ ಅರ್ಜಿ ಬರೆದುಕೊಟ್ಟಿಲ್ಲ. ಯಾವುದೇ ತರಹದ ಪರವಾನಗಿ ಪಡೆದಿಲ್ಲ. ಆದ್ದರಿಂದ ಸಾಕ್ಷಿ ಸಂ. 8 ಆಪಾದಿತ ದಿ. 01–05–2008 ರಿಂದ 30–06–2008ರ ವರೆಗೆ ಗೈರು ಹಾಜರಾಗಿರುವುದನ್ನು ಸ್ಪಷ್ಟವಾಗಿ ಸಾಬೀತುಪಡಿಸಿದ್ದಾರೆ.

**70. ಆರೋಪ 8 –** ದಿ. 14–05–2007 ರಿಂದ 24–05–2007ರ ವರೆಗೆ ಗೈರು ಹಾಜರಾಗಿರುವುದು ಸಾಕ್ಷಿಯ ಹೇಳಿಕೆಯಿಂದ ಮತ್ತು ಇತರ ದಾಖಲೆಗಳಿಂದ ಸಾಬೀತಾಗಿದೆ. ಕಛೇರಿಯಿಂದ ಕಳುಹಿಸಿದ ನೋಟಿಸ್‌ಗೆ ಯಾವುದೇ ಉತ್ತರ ನೀಡಿಲ್ಲ. ಆಪಾದಿತರನ್ನು ಇ.ಸಿ.ಎಸ್. ಮಾಡಿಸಲು ಕೆ.ಜಿ.ಸಿ.ಸಿ.ಗೆ ಕಳುಹಿಸಿದರು. ನಿ.ಪಿ.2 ಆಪಾದಿತರಿಗೆ ಜಾರಿ ಆಗಿರುವುದನ್ನು ಹಾಜರುಪಡಿಸಿಲ್ಲ ಎಂದು ವಾದಿಸಿದರು. ಹಾಜರಾತಿ ಪುಸ್ತಕ ಆ ಅವಧಿಗೆ ಹಾಜರಿ ಮಾಡದಿದ್ದರೂ ಆಪಾದಿತರು ಕಛೇರಿಗೆ ಸಂಬಂಧಿಸಿದ ಯಾವ ಕೆಲಸವನ್ನೂ ಮಾಡಿರುವುದನ್ನು ತನ್ನ ಸ್ವಂತ ಹೇಳಿಕೆಯಿಂದ ಯಾ ದಾಖಲೆಗಳಿಂದ ಸಾಬೀತುಪಡಿಸಿಲ್ಲ. ಯಾವುದೋ ಅಪರಾಧಕ್ಕೆ ನಂಜನಗೂಡು ಪೋಲಿಸ್ ಠಾಣೆಯಲ್ಲಿ ಇರುವುದಾಗಿ ತಿಳಿಸಿದ್ದೆ ಎಂದು ಹೇಳುವುದು ಆಪಾದಿತ ಕಛೇರಿ ಕೆಲಸ ಮಾಡದೆ ತನ್ನ ಪಾಡಿಗೆ ಪೋಲಿಸ್ ಠಾಣೆಯಲ್ಲಿ ಇದ್ದರೆ ಅದನ್ನು ಕರ್ತವ್ಯ ಮೇಲಿದ್ದರೆಂದು ಮತ್ತು ಅವನ ಗೈರು ಹಾಜರಿಯನ್ನು ಕಛೇರಿಯಲ್ಲಿ ಮನ್ನಿಸುವುದು ಸಮರ್ಪಕವಲ್ಲ. ಆದ್ದರಿಂದ ಆರೋಪ 8 ಸಾಬೀತಾಗಿರುತ್ತದೆ.

**71. ಆರೋಪ 9 –** ಈ ಆರೋಪಣೆ ಸಾಬೀತು ಮಾಡಲು ಮಂಡನಾಧಿಕಾರಿಯು ಯಾವುದೇ ದಾಖಲೆಗಳ ಮೇಲೆ ಯಾ ಬಾಯ್ದೆರೆ ಸಾಕ್ಷಿ ಮೇಲೆ ಅವಲಂಬಿಸಿಲ್ಲ ಮತ್ತು ಅದಕ್ಕೆ ಸಂಬಂಧಿಸಿದ ಯಾವುದೇ ಸಂದರ್ಭ ಅವಕಾಶಗಳನ್ನು ತೋರಿಸಿಕೊಡಲಿಲ್ಲ. ಆದ್ದರಿಂದ ಈ ಆರೋಪ ಸಾಬೀತಾಗಿಲ್ಲ.

**72. ಆರೋಪ 10 –** ಆಪಾದಿತರು ಕಛೇರಿಗೆ ಗೈರು ಹಾಜರಾಗಿ ಆತ ಮಾಡಬೇಕಾದ ಆಡಳಿತ ಮತ್ತು ಲೆಕ್ಕ ವಿಭಾಗದ ಕರ್ತವ್ಯಗಳನ್ನು ಮಾಡದಿರುವುದು ಸಾಕ್ಷಿಗಳ ಹೇಳಿಕೆಯಿಂದ ಸಾಬೀತಾಗಿರುತ್ತದೆ.

**73.** ಸಾಕ್ಷಿ ಸಂಖ್ಯೆ 1 ಈ ವಿಷಯ ವಿವರಿಸಿದ್ದಾರೆ. ನಿವೃತ್ತಿ ವೇತನದ ದಾಖಲೆಗಳನ್ನು ಸಮಯಕ್ಕೆ ಸರಿಯಾಗಿ ಮೇಲಾಧಿಕಾರಿಗಳು ಕಳುಹಿಸದೇ ಇರುವುದುನ್ನು ಸ್ಪಷ್ಟವಾಗಿ ಹೇಳಿದ್ದಾರೆ. ಈ ಆಪಾದನೆಯನ್ನು ಆಪಾದಿತರು ಹೇಳುವಂತೆ ಯಾವುದೇ ತರಹದ ಸುಳ್ಳು ಆಪಾದನೆಯಾಗಿಲ್ಲ. ಕಛೇರಿಯಲ್ಲಿ ಬೇರೆ ಒಂದನೇ ದರ್ಜೆಯ ಗುಮಾಸ್ತ ಇರಲಿಲ್ಲ. ಆ ಕಛೇರಿ ಕೆಲಸವನ್ನು 10 ದಿವಸ ಬೇರೆ ಯಾರೂ ಮಾಡದೆ ತೊಂದರೆ ಆಗಿರಲೇ ಬೇಕು. ಕಛೇರಿಯ ಅಧಿಕಾರಿಯು ಆವಾಗ ಆಗಬೇಕಾದ ಕೆಲಸವನ್ನು ಮುಂದೆ ಯಾವಗ ಆಯಿತೆಂದು ವಿವರಣೆ ನೀಡಬೇಕಾಗಿಲ್ಲ. ಬೇಕಾದ ವಿವರ 2ನೇ ಅನುಬಂಧದಲ್ಲಿ ಸೇರಿರುತ್ತದೆ. ಇದು ಕ್ಷುಲ್ಲಕ ಅಪರಾಧ ಅಲ್ಲ. ಕಛೇರಿ ಯಾವುದನ್ನು ಮರೆಮಾಚಿಲ್ಲ. ಇದ್ದುದನ್ನು ಸ್ಪಷ್ಟವಾಗಿ ಹೇಳಿರುತ್ತದೆ. ಶಿಸ್ತು ಪ್ರಾಧಿಕಾರಿ ಆಪಾದಿತರ ಮೇಲೆ ಮನಬಂದಂತೆ ಸುಳ್ಳು ಅಪವಾದ ಮಾಡಿಲ್ಲ.

**74. ಆರೋಪ 11** – ಆಪಾದನೆಯಲ್ಲಿ ಕಾಣುವ ಎಲ್ಲಾ ವಿವರಗಳು, ದಾಖಲೆಗಳಿಂದ ಮತ್ತು ಶ್ರೀ ಸಿದ್ದರಾಜು ರವರ ಹೇಳಿಕೆಯಿಂದ ಸ್ಪಷ್ಟವಾಗಿ ಸಾಬೀತಾಗಿದೆ. ಅವರು ಹೇಳಿದಂತೆ ದಾಖಲೆಗಳಲ್ಲಿಯೂ ಆಪಾದಿತರು ಮಾಡಿದ ತಪ್ಪು ವೇದ್ಯವಾಗುತ್ತದೆ. ಆಪಾದಿತರು ಸಾಕ್ಷಿಗಳಿಂದ ತೆಗೆದುಕೊಂಡ ಹಣಕ್ಕೆ ರಸೀದಿ ಕೊಡದಿರುವಾಗ ಮತ್ತು ಅವುಗಳು ಸ್ವಂತ ಹೇಳಿಕೆಯಿಂದ ಸ್ಪಷ್ಟವಾದಾಗ ಬೇರೆ ವಿವರ ಯಾ ದಾಖಲೆಗಳು ಅಗತ್ಯವಿರುವುದಿಲ್ಲ. ಕಛೇರಿಯ ಪುಸ್ತಕದ ನಕಲುಗಳಿಂದ ಸ್ಪಷ್ಟವಾಗಿ ಎಲ್ಲಾ ವಿವರಗಳು ಕಂಡುಬರುತ್ತವೆ. ಹಣ ದುರುಪಯೋಗ ಮಾಡಿದ್ದು ಕಂಡುಬರುತ್ತದೆ. ಯಾವುದೇ ಹಣ ತೆಗೆದುಕೊಳ್ಳುವಾಗ ಅದರ ವಿವರ ತೆಗೆದುಕೊಳ್ಳುವ ಅಧಿಕಾರಿಯು ಬರೆದುಕೊಳ್ಳಬೇಕು. ಯಾವುದೇ ಸಾಕ್ಷಿಯು ಆಪಾದಿತರ ಮೇಲೆ ವೈಷಮ್ಯದಿಂದ ಅಥವಾ ಅನಾವಶ್ಯಕ ಕಿರುಕುಳ ಕೊಡಲು ಆಪಾದನೆ ಮಾಡಿದ್ದು ಕಂಡುಬಂದಿಲ್ಲ. ಆಪಾದಿತರು ಈ ಯಾವುದೇ

ಸಾಕ್ಷಿಗಳು ಸುಳ್ಳು ಹೇಳಿ ಆಪಾದಿತರ ಮೇಲೆ ಇಲ್ಲದ ತಪ್ಪನ್ನು ಹೊರಿಸಿದ್ದು ಯಾ ದೂರು ನೀಡಿದ್ದು ಕಂಡುಬರುವುದಿಲ್ಲ. ಆದ್ದರಿಂದ ಈ ಆಪಾದನೆಯು ನನ್ನ ಮುಂದೆ ಸಾಕ್ಷಿಗಳಿಂದ ಮತ್ತು ದಾಖಲೆಗಳಿಂದ ಸಾಬೀತಾಗಿದೆ.

**75. ಆರೋಪ 12 –** ಕಛೇರಿ ನೀಡಿದ ನೋಟಿಸ್‌ಗೆ ಆಪಾದಿತರು ಮಾನಸಿಕ ಹಿಂಸೆ ನೀಡುತ್ತಾರೆ ಮತ್ತು ಆತ್ಮಹತ್ಯೆ ಮಾಡಿಕೊಳ್ಳುತ್ತೇನೆಂದು ಬರೆಯುವುದು ಇಲಾಖೆಯ ಮುಖ್ಯಸ್ಥರನ್ನು ಹೆದರಿಸುವ ವಿಧಾನವಾಗಿರುತ್ತದೆ. ವೈಯಕ್ತಿಕ ದ್ವೇಷದಿಂದ ಅಥವಾ ಸೇಡಿನಿಂದ ನೋಟಿಸ್ ನೀಡಿರುವುದು ಯಾ ಸಾಕ್ಷಿ ಹೇಳಿರುವುದು ಸಾಬೀತಾಗಿಲ್ಲ. ಕಛೇರಿಯ ವ್ಯಕ್ತಿಗಳ ಮೇಲೆ ಕ್ರಮ ಕೈಗೊಳ್ಳುವಾಗ ಎಲ್ಲರಿಗೂ ಒಂದೇ ರೀತಿಯ ಕ್ರಮವನ್ನು ಕಛೇರಿಯ ಅಧಿಕಾರಿ ತೆಗೆದುಕೊಳ್ಳಬೇಕೆಂದಿಲ್ಲ. ವ್ಯಕ್ತಿಯ ಮೇಲೆ ಹೊಂದಿಕೊಂಡು ಅವರ ನಡತೆಯನ್ನು ನೋಡಿಕೊಂಡು ಸೂಕ್ತವಾಗಿ ತನ್ನ ವಿವೇಚನೆಗೆ ಅನುಗುಣವಾಗಿ ತಕ್ಕ ಕ್ರಮ ತೆಗೆದುಕೊಳ್ಳುವುದರಲ್ಲಿ ಯಾವುದೇ ದುರ್ನಡತೆ ಅಧಿಕಾರಿಗೆ ಇತ್ತೆಂದು ಯಾವುದೇ ರೀತಿಯಲ್ಲಿ ಯೋಚನೆ ಮಾಡಿದರೂ ಒಪ್ಪಲು ಸಾಧ್ಯವಿಲ್ಲ. ಆಪಾದಿತರು ಕಛೇರಿಯಲ್ಲಿ ಮಾಡಿದ ದುರ್ನಡತೆಗಳು ಆರೋಪಣ ಪಟ್ಟಿಗಳಿಂದ 9ನೇ ಆರೋಪ ಹೊರತುಪಡಿಸಿ ಮತ್ತು ಸಾಕ್ಷಿಗಳ ಹೇಳಿಕೆಯಿಂದ ಹಾಗೂ ದಾಖಲೆಗಳಿಂದ ಸ್ಪಷ್ಟವಾಗಿ ಸಾಬೀತಾಗಿವೆ.

ಬೆಂಗಳೂರು

ದಿನಾಂಕ:21.04.2010

**ವಿ. ಪದ್ಮನಾಭ ಕೆದಿಲಾಯ**

ವಿಚಾರಣಾಧಿಕಾರಿ,

ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶ, ನಂ. 45, 4ನೇ ಅಡ್ಡರಸ್ತೆ,

ಜುಡಿಷಿಯಲ್ ಆಫೀಸರ್ ಲೇಔಟ್, ಸಂಜಯನಗರ,

ಬೆಂಗಳೂರು–560 094.

**ಸರ್ಕಾರಿ ಸಾಕ್ಷಿಗಳು :**

1. ಶ್ರೀ ಬಿ. ಶ್ರೀನಿವಾಸಾಚಾರ್
2. ಶ್ರೀಮತಿ ಡಿ.ಆರ್. ಸವಿತಾ
3. ಶ್ರೀ ಸಿದ್ದರಾಜು
4. ಶ್ರೀಮತಿ ವೀಣಾ ಕುಲಕರ್ಣಿ
5. ಶ್ರೀಮತಿ ಸಿ. ಮಂಜುಳಾ
6. ಡಾ॥ ವಿ. ಮುನಿರಾಜು
7. ಕು. ಆರ್. ಜ್ಯೋತಿ
8. ಶ್ರೀ ಎಸ್. ಸುದರ್ಶನ್
9. ಶ್ರೀ ಪಿ. ಮಂಜು
10. ಶ್ರೀಮತಿ ಬಿ.ಎನ್. ಜಯಶ್ರೀ

**ಸರ್ಕಾರದ ಪರವಾಗಿ ಗುರುತಿಸಲಾದ ದಾಖಲೆಗಳು**

**ನಿ.ಪಿ.1 –** ದಿನಾಂಕ 21–05–2007 ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು ಕೇಂದ್ರ ನಿರ್ದೇಶಕರಿಗೆ ಪತ್ರ ಬರೆದು ಕಪಾಟಿನ ಬೀಗ ಒಡೆಯಲು ಪರವಾನಗಿ ಕೇಳಿದರು.

**ನಿ.ಪಿ.2 –** ದಿನಾಂಕ 18–05–2007 ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು ಶಿಸ್ತಿನ ಕ್ರಮ ಏಕೆ ತೆಗೆದುಕೊಳ್ಳಬಾರದೆಂದು ಆಪಾದಿತರಿಗೆ ನೀಡಿದ ನೋಟಿಸ್.

**ನಿ.ಪಿ.3 –** ದಿನಾಂಕ 05–09–2007 ಶ್ರೀ ಕೆ. ಸಿದ್ದರಾಜು ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳಿಗೆ ಆಪಾದಿತರು ರೂ. 2000/– ಗಳನ್ನು ತನ್ನಿಂದ ಪಡೆದಿರುವ ಬಗ್ಗೆ ಬರೆದ ಪತ್ರ.

**ನಿ.ಪಿ.4 –** ದಿನಾಂಕ 13–07–2007 ಆಪಾದಿತರು ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳಿಂದ ತನ್ನನ್ನು ವರ್ಗಾವಣೆ ಮಾಡಬಾರದೆಂದು ಕೇಂದ್ರ ನಿರ್ದೇಶಕರಿಗೆ ಬರೆದು ಸಹಿ ತೆಗೆದುಕೊಂಡ ಪತ್ರ.

**ನಿ.ಪಿ.5 –** ದಿನಾಂಕ 08–08–2007 ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು ತಾನು ಯಾವ ಸಂದರ್ಭದಲ್ಲಿ ನಿಪಿ4 ಕ್ಕೆ ಸಹಿ ಹಾಕಿದೆ ಎಂದು ಬರೆದ ಪತ್ರ.

**ನಿ.ಪಿ.6 ರಿಂದ 11 –** ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು ಬೇರೆ ಬೇರೆ ತಿಂಗಳಿನಲ್ಲಿ ಯಾವ ಯಾವ ಹಣ ಯಾವುದರ ಬಗ್ಗೆ ಖಜಾನೆಯಿಂದ ತೆಗೆಯಲಾಯಿತೆಂದು ತೋರಿಸುವ ಮಾಸಿಕ ತ:ಖ್ತೆಗಳು.

**ನಿ.ಪಿ.12 –** ದಿನಾಂಕ 14–05–2008 ಶ್ರೀಮತಿ ವೀಣಾ ಕುಲಕರ್ಣಿ ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳಿಗೆ ಕಾಗದ ಬರೆದು ರೂ. 5600/– ಗಳನ್ನು ತನ್ನ ವೇತನದಿಂದ ಆಪಾದಿತರು ಸ್ವೀಕೃತಿ ನೀಡದೆ ಡಿ.ಸಿ.ಪಿ.ಎಸ್.ಗೆ ಎಂದು ಪಡೆದಿದ್ದಾರೆ ಎಂದು ಬರೆದ ಪತ್ರ.

**ನಿ.ಪಿ.13 –** ದಿನಾಂಕ 29–01–2008 ಆಪಾದಿತರನ್ನು ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿಯಿಂದ ವರ್ಗ ಮಾಡಿದಾಗ ಅವರು ಶ್ರೀಮತಿ ಸಿ. ಮಂಜುಳಾ, ಬೆರಳಚ್ಚುಗಾರರಿಗೆ ತನ್ನ ಪ್ರಭಾರವನ್ನು ನೀಡಲು ಆಜ್ಞಾಪಿಸಿದ ಆಜ್ಞೆ.

**ನಿ.ಪಿ.14** – ಆಪಾದಿತರು ತನ್ನ ಸ್ವಾಧೀನವಿದ್ದ 167 ಕಡತಗಳನ್ನು ಶ್ರೀಮತಿ ಸಿ. ಮಂಜುಳಾ ರವರಿಗೆ ನೀಡಿದ ಕಡತಗಳ ಪಟ್ಟಿ.

**ನಿ.ಪಿ.15** – ದಿನಾಂಕ 23–06–2008 ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು ಶ್ರೀಮತಿ ವೀಣಾ ಕುಲಕರ್ಣಿ ಬರೆದುಕೊಟ್ಟ ಪತ್ರವನ್ನು ರಾಮನಗರ ಜಿಲ್ಲೆಗೆ ಕಳುಹಿಸಿಕೊಟ್ಟ ಹಿಂಬರಹ.

**ನಿ.ಪಿ.16** – ದಿನಾಂಕ 09–05–2008 ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು 2 ದಿನಗಳೊಳಗಾಗಿ ಆಪಾದಿತರು ತನ್ನಲ್ಲಿದ್ದ ಇತರ ಕಡತಗಳ ಪ್ರಭಾರ ನೀಡದಿದ್ದಲ್ಲಿ ಶಿಸ್ತಿನ ಕ್ರಮ ತೆಗೆದುಕೊಳ್ಳಲಾಗುವುದೆಂದು ಆಪಾದಿತರಿಗೆ ನೀಡಿದ ಕಡೆಯ ಎಚ್ಚರಿಕೆ ನೋಟಿಸ್.

**ನಿ.ಪಿ.17** – ದಿನಾಂಕ 23–05–2008 ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು ಆದಿಕುಮಾರ್‌ರವರ ಕಪಾಟನ್ನು ಸಿಬ್ಬಂದಿಗಳ ಸಮಕ್ಷಮ ಒಡೆದಾಗ ಸಿಕ್ಕಿದ 170 ದಾಖಲೆ ಮತ್ತು ಪುಸ್ತಕಗಳ ಪಟ್ಟಿ.

**ನಿ.ಪಿ.18** – ದಿನಾಂಕ 15–05–2008 ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು ಆಪಾದಿತರಿಗೆ ನೋಟಿಸ್ ನೀಡಿ ದಿನಾಂಕ 01–05–2008 ರಿಂದ 15–05–2008 ರವರೆಗೆ ಹಾಗೂ ದಿನಾಂಕ 23–04–2008 ರಿಂದ 24–04–2008 ರವರೆಗೆ ಗೈರು ಹಾಜರಾಗಿ ತೊಂದರೆಯಾದುದರ ಬಗ್ಗೆ ಅವರಿಂದ ಸಮಜಾಯಿಷಿ ಕೇಳಿರುವ ನೋಟಿಸ್.

**ನಿ.ಪಿ.19** – ಅಪಾದಿತರು ಗೈರು ಹಾಜರಾದದ್ದನ್ನು ತೋರಿಸುವ ಹಾಜರಿ ಪಟ್ಟಿ.

**ನಿ.ಪಿ.20** – ದಿನಾಂಕ 20–05–2008 ಆಪಾದಿತರ ಕಪಾಟು, ಅಲಮೇರಾ ಮತ್ತು ಮೇಜಿನಲ್ಲಿದ್ದ ಕಡತ ಹಾಗೂ ರಿಜಿಸ್ಟರ್‌ಗಳ ಪಟ್ಟಿ ನಿರ್ದೇಶಕರಿಗೆ ಕಳುಹಿಸಲಾದ ಪತ್ರ.

**ನಿ.ಪಿ.21** – ಚೆಕ್ ಸಂಖ್ಯೆ 185493 ನ್ನು ದಿನಾಂಕ 17–03–2008 ರಂದು ಕು. ಆರ್.ಜ್ಯೋತಿಗೆ ನೀಡುವುದಕ್ಕಾಗಿ ರೂ. 34774/– ಗಳನ್ನು ಖಜಾನೆಯಿಂದ ತರಿಸಿಕೊಂಡ ವಿವರ ತೋರಿಸುವ ಚೆಕ್ ಪುಸ್ತಕದ ನಕಲು.

**ನಿ.ಪಿ.22** – ಆಪಾದಿತರು ಕು. ಆರ್. ಜ್ಯೋತಿಗೆ ರೂ. 34774/– ಗಳ ಬದಲಿಗೆ ರೂ. 32774/– ಗಳನ್ನು ಮಾತ್ರ ಕೊಟ್ಟು ತಿದ್ದುಪಡಿ ಮಾಡಿದ ವೇತನ ಪುಸ್ತಕದ ನಕಲು.

**ನಿ.ಪಿ.23** – ದಿನಾಂಕ 15–05–2008ರ ನಗದು ಪುಸ್ತಕದ ನಕಲು.

**ನಿ.ಪಿ.24** – ದಿನಾಂಕ 27–05–2008 ಕು. ಆರ್. ಜ್ಯೋತಿ ಆಪಾದಿತರು ತನಗೆ ದಿನಾಂಕ 04–10–2007 ರಿಂದ ಬರಬೇಕಾದ ರೂ. 34774/– ರ ಬದಲಿಗೆ ರೂ. 32774/– ನ್ನು ಮಾತ್ರ ಕೊಟ್ಟು ರೂ. 2000/– ಗಳನ್ನು ಕಡಿಮೆ ನೀಡಿದ ದೂರು.

**ನಿ.ಪಿ.25** – ದಿನಾಂಕ 24–06–2008 ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು ಆಪಾದಿತರಿಗೆ ನೋಟಿಸ್ ನೀಡಿ ವಿವರಣೆ ಕೇಳಿದ ಪತ್ರದ ನಕಲು.

**ನಿ.ಪಿ.26** – ದಿನಾಂಕ 26–06–2008 ಶ್ರೀ ಮಂಜು ಪಿ. ರವರು ಆಪಾದಿತರು ಡಿ.ಸಿ.ಪಿ.ಎಸ್. ಗಾಗಿ ರೂ. 2000/– ಗಳನ್ನು ತನಗೆ ಕಡಿಮೆ ನೀಡಿರುವ ಕುರಿತು ಬರೆದುಕೊಟ್ಟ ದೂರು.

**ನಿ.ಪಿ.27** – ದಿನಾಂಕ 30–06–2008 ರಂದು ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ರಾಮನಗರ ಆಪಾದಿತರಿಂದ 3 ದಿನದಲ್ಲಿ ಉತ್ತರ ನೀಡುವಂತೆ ಆಪಾದಿತರಿಂದ ಶ್ರೀಮತಿ ವೀಣಾ ಕುಲಕರ್ಣಿ ನೀಡಿದ ದೂರಿಗೆ ವಿವರಣೆ ಕೇಳಿದ ಪತ್ರ.

**ನಿ.ಪಿ.28** – ದಿನಾಂಕ 05–10–2007 ರಂದು ನಿರ್ದೇಶಕರು ಆಪಾದಿತರಿಗೆ ನೀಡಿದ ಕೊನೆಯ ನೋಟಿಸ್.

**ನಿ.ಪಿ.29** – ದಿನಾಂಕ 27–10–2007 ರಂದು ಆಪಾದಿತರು ಕೇಂದ್ರ ನಿರ್ದೇಶಕರಿಗೆ ನೀಡಿದ ಉತ್ತರದ ನಕಲು.

**ನಿ.ಪಿ.30** – ದಿನಾಂಕ 22–11–2007 ರಂದು ನಿರ್ದೇಶಕರು ಆಪಾದಿತರು ಬರೆದ ಪತ್ರದಲ್ಲಿ ಆತ್ಮಹತ್ಯೆ ಮಾಡಿಕೊಳ್ಳುವುದಾಗಿ ಬರೆದಿರುವುದನ್ನು ಖಂಡಿಸಿ ಅವರು ಮಾಡಿದ ಅಪರಾಧವನ್ನು ತೋರಿಸಿದ ಪತ್ರದ ನಕಲು.

**ಆಪಾದಿತರ ಪರ ಗುರುತಿಸಲಾದ ದಾಖಲೆಗಳು**

**ನಿ.ಡಿ.1** – ದಿನಾಂಕ 20–05–2008 ಬೆಂಗಳೂರು ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಯು ರಾಮನಗರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗೆ 7 ಮಂದಿ ನೌಕರರ ಸೇವಾ ಪುಸ್ತಕವನ್ನು ಲಗತ್ತಿಸಿ ಕಳುಹಿಸಿದ ಪತ್ರ.

**ನಿ.ಡಿ.2** – ದಿನಾಂಕ 09–09–2003 ರಿಂದ 15–07–2004 ರವರೆಗಿನ ಕಛೇರಿಯ ಟಿಪ್ಪಣಿ ಮತ್ತು ಆದೇಶಗಳು. ಪ್ಯಾರಾ 1 ರಿಂದ 34.

ಆಪಾದಿತರು ದೋಷಾರೋಪಣೆಯಲ್ಲಿ ನಮೂದಿಸಿದಂತೆ 1966ರ ಸರ್ಕಾರಿ ನೌಕರರ ನಡತೆ ನಿಯಮಾವಳಿ 3 ರಂತೆ ಗಂಭೀರದ ತಪ್ಪು ಮಾಡಿರುವುದು ಸ್ಪಷ್ಟವಾಗಿ ಸಾಬೀತಾಗಿದೆ. ತನ್ನ ಕೆಲಸದಲ್ಲಿ ನಿರ್ಲಕ್ಷತೆ, ಇತರರಿಗೆ ಮೋಸ, ವಂಚನೆ, ಹಣದ ದುರುಪಯೋಗ ಇತ್ಯಾದಿ ತಪ್ಪು ಮಾಡಿರುವುದು ಸ್ಪಷ್ಟವಾಗಿ ನನ್ನ ಮುಂದೆ ಕಂಡುಬಂದಿದೆ. ಆದ್ದರಿಂದ 9ನೇ ಆರೋಪ ಹೊರತುಪಡಿಸಿ ಉಳಿದ ಆರೋಪಗಳ ಮೇಲೆ ನನ್ನ ಉತ್ತರ ಸಕಾರಾತ್ಮಕವಾಗಿದೆ.

ಬೆಂಗಳೂರು
ದಿನಾಂಕ:

**ವಿ. ಪದ್ಮನಾಭ ಕೆದಿಲಾಯ**
ವಿಚಾರಣಾಧಿಕಾರಿ,
ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶ, ನಂ. 45, 4ನೇ ಅಡ್ಡರಸ್ತೆ,
ಜುಡಿಷಿಯಲ್ ಆಫೀಸರ್ ಲೇಔಟ್, ಸಂಜಯನಗರ,
ಬೆಂಗಳೂರು–560 094.

ಪಿ.ಆರ್.1529

**OFFICE OF THE COMMISSIONER BANGALORE DEVELOPMENT AUTHORITY , BANGALORE NOTIFICATION**

**UNDER SECTION 17(1)&(3)OF BDA ACT 1976**

**No: BDA/COMMR/LAO/ 283/2010-11 , Bangalore Dated:24th September, 2010**

Whereas it appears to the Bangalore Development Authority that the land specified in the Schedule hereto likely to be needed for the public purpose i.e., for the formation of "Providing left turn from Mysore Road ORR to Magadi Road Junction " in this regard development scheme has been prepared.

Notice to the effect is hereby given to all whom it may concern in accordance with the provisions of Sub-Section (1) & (3) of section 17 of the Bangalore Development Authority Act 1976 (Karnataka Act No:12 of 1976).

In accordance with section 36 of BDA Act, the land Acquisition Officer, Bangalore Development Authority, Bangalore his staff and workmen are hereby authorised to exercise the Power conferred under Section 4(2) of LA Act 1894. Any person/s interested in the land may prefer his/her objections with in 30 days from the date of publication of this notification to the Land Acquisition Officer, Bangalore Development Authority, T.Chowdaiah Road, Bangalore-560 020.

All persons interested in the said lands are hereby warned not to abstract or interfere with any Surveyor or any persons employed upon to the said lands for the purpose of said Acquisition. Any contracts for the disposal of the said lands by Sale, lease, Mortgage, Assignment, Exchange or otherwise or any other out-lay or Improvements made there in without sanction of the Deputy Commissioner(Land Acquisition).Bangalore Development Authority, Bangalore-560 020, after the date of publication of this Notification shall under section 24 of the Land Acquisiton Act 1894, be dis-regarded by the officer assessing compensation for such parts of the said lands as may be finall acquired.

The particulars of the scheme, the Maps of the area comprised therein and the statement specifying the lands which it is proposed to be acquired may be seen in the Office of the Land Acquisition Officer, Bangalore Development Authority, Bangalore during the office hours on all working days.

**SCHEDULE**

**District:**Bangalore **Taluk:**Bangalore South Taluk **Hobli:**Kengeri **Village:**Nayandahally

| Sl. No. | Name of the Khathedars/ Anubhavadars | Sy. No. | Whether Dry/Wet/ Garden | Extent | Kharab Land | Remaining Extent | Assesment | Extent proposed for acquisition | Boundaries | | | |
|---|---|---|---|---|---|---|---|---|---|---|---|---|
| | | | | A- G | A- G | A- G | A- G | A- G | East | West | North | South |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 |
| 1 | C.N.Satyanarayanashetty | 50/8B2 (50/8B as per RTC) | Dry | 1-13 | 0-01 | 1-12 | 1-35 | 0-04 | Road | 50/8B1 | 50/9 | Road |

Commissioner

PD-127

Bangalore Development Authority, Bangalore.

